

2009–10ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂದಿಸಿದಂತೆ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ.

# "ನಾ ಡಿಸೋಜ ಅವರ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು"





2009-10ನೇ ಸಾಲಿನ ಎಂ.ಫಿಲ್ ಪದವಿ ಪರೀಕ್ಷೆಗೆ ಸಂಬಂಧಿಸಿದಂತೆ ಕನ್ನಡ
ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ.

# "ನಾ ಡಿಸೋಜ ಅವರ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರಗಳು"

ಸಂಶೋಧಕರು- ರೇಷ್ಮಾ ಟಿ.ಎಸ್.
ಮಾರ್ಗದರ್ಶಕರು - ಡಾ. ಹಿ.ಚಿ. ಬೋರಲಿಂಗಯ್ಯ.





## ವಿಷಯ ಸೂಚಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯವು ಹಲವು ಸ್ಥಿತ್ಯಂತರಗಳನ್ನು ಮತ್ತು ಚಳುವಳಿಗಳನ್ನು ಹಾದು ಬಂದಿದೆ. ಹಾಗೆಯೇ ನಿರಂತರವಾಗಿ ತನ್ನನ್ನು ಬದಲಾವಣೆಗೆ ಒಡ್ಡಿಕೊಂಡೆ ಬರುತ್ತಿದೆ. ಸಮಾಜ ಚಲನಶೀಲವಾದುದು ಹಾಗೂ ಪರಿವರ್ತನಾಶೀಲವಾದುದು. ಹೀಗಾಗಿ ಸಾಹಿತ್ಯವು ಅದರಿಂದ ಹೊರತಾಗಿಲ್ಲ ಎಂದು ಹೇಳಬಹುದು. ಸಮಾಜದ ಆಗುಹೋಗುಗಳಿಗೆ ಸ್ಪಂದಿಸುತ್ತಾ ನಿರಂತರವಾಗಿ ಬದಲಾವಣೆಯನ್ನು ಹೊಂದುತ್ತಾ ಇದುವರೆಗೂ ಅನೇಕ ಕಾಲಘಟ್ಟಗಳಲ್ಲಿ ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಳೆದು ಬಂದಿರುವುದನ್ನು ತಿಳಿಯ ಬಹುದಾಗಿದೆ. ಈ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ.

ನಾ. ಡಿಸೋಜರವರು ಒಬ್ಬ ಸೃಜನಶೀಲ ಬರಹಗಾರರಾಗಿ ಸಣ್ಣಕಥೆ, ಮಕ್ಕಳ ಸಾಹಿತ್ಯ, ನಾಟಕ, ಜಾನಪದ ಹಾಗೂ ಅನೇಕ ಬಿಡಿ ಲೇಖನಗಳನ್ನು ಬರೆದು ಸಾಹಿತ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದ್ದಾರೆ. ಇವರು ತಮ್ಮ ಪ್ರತಿಭೆಯ ಮೂಲಕ ಕಾದಂಬರಿಗಳಲ್ಲಿ ಮಲೆನಾಡಿನ ಪರಿಸರದ ರಮಣೀಯತೆ, ಪರ್ವತ ಶ್ರೇಣಿ, ಸೊಂಪಾದ ದಟ್ಟ ಕಾಡು, ವಿಶಾಲನದಿ, ಭೋರ್ಗರೆವ ಜಲಪಾತ, ಪ್ರಾಣಿಪಕ್ಷಿ, ಸಂಕುಲ, ಮರ, ಗಿಡ, ಬಳ್ಳಿ ಎಲ್ಲವನ್ನು ಆಯ್ದುಕೊಂಡು ಸರಳತೆ, ಸಮೃದ್ಧತೆ ಮೆರೆದಿದ್ದಾರೆ. ಈ ಅಂಶಗಳೇ ಅವರ ಕಾದಂಬರಿಯ ಜೀವಾಂಶವಾಗಿದೆ. ನಾ. ಡಿಸೋಜರವರ ದ್ವೀಪ, ಮುಳುಗಡೆ, ಒಡ್ಡು, ಕುಂಜಾಲು ಕಣಿವೆಯ ಕೆಂಪು ಹೂವು, ಒಂದು ಜಲಪಾತದ ಸುತ್ತ, ನೀರು, ವಿಷಾನಿಲ ಚಿನ್ನದ ಮೊಟ್ಟೆ ಈ ಕಾದಂಬರಿಗಳಲ್ಲಿನ ವಿವಿಧ ಬಗೆಯ ಸ್ಥಿತ್ಯಂತರಗಳನ್ನು ಗುರುತಿಸುವುದು ಈ ನಿಬಂಧದ ಉದ್ದೇಶವಾಗಿದೆ.

ನಾ. ಡಿಸೋಜರವರ ಕಾದಂಬರಿಗಳನ್ನು ಸಮೀಕ್ಷಿಸಿದಾಗ ಬ್ರಿಟಿಷರ ಕಾಲದಿಂದ ಇಲ್ಲಿಯವರೆಗೆ ಸಾಗರ, ಸಿದ್ಧಾಪುರ, ಜೋಗ, ನಗರ, ಹೊಸನಗರ ಮುಂತಾದ ಪ್ರದೇಶಗಳಲ್ಲಿನ ಮಲೆನಾಡಿನ ವನ ಸಂಪತ್ತು, ಜಲ ಸಂಪತ್ತು, ಪ್ರಾಣಿ ಸಂಕುಲ ಹೇಗೆ ನಾಶವಾಗುತ್ತಿವೆ ಎಂಬುದನ್ನು ಮನಗಾಣಿಸುತ್ತಾ ಹೋಗಿದೆ. ಮಲೆನಾಡಿನ ಪ್ರಕೃತಿ ಮಡಿಲಿನಲ್ಲಿಯೇ ಬೆಳೆದ ಇವರು ಕಾಲಕಾಲಕ್ಕೆ ಆದ ಬದಲಾವಣೆಗಳಿಗೆ ಸಾಕ್ಷಿ ಭೂತರಾದವರಂತೆ ಇವರ ಕಥಾ ನಾಯಕರು ಸೃಷ್ಟಿಯಾಗಿದ್ದಾರೆ. ಒಂದೊಂದು ಕಡೆ ಇವರೇ ನಿರೂಪಕರೂ ಕಥೆಯ ಒಂದು ಪಾತ್ರವೂ ಆಗಿರುವುದನ್ನು ಕೆಲವು

ಕಾದಂಬರಿಗಳಲ್ಲಿ ಕಾಣಬಹುದು. ಐದಾರು ದಶಕಗಳಲ್ಲಿ ಆದ ಬದಲಾವಣೆಗಳಲ್ಲಿ ಜನಸಂಖ್ಯೆ ಹೆಚ್ಚಳ, ಸ್ವಾರ್ಥ ರಾಜಕಾರಣಿಗಳು, ವನಭಕ್ಷಕರು, ಪ್ರಕೃತಿಯನ್ನು ವಿನಾಶದ ಅಂಚಿಗೆ ತಳ್ಳುತ್ತಿರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವುದನ್ನು ಕಾಣಬಹುದುದಾಗಿದೆ. ಇದು ನಾ. ಡಿಸೋಜರವರು ತಮ್ಮ ಕೃತಿಯಲ್ಲಿ ಮಾಡಿರುವ ಚಿಂತನೆಯಾಗಿದೆ. ಇದು ನಮ್ಮೆಲ್ಲರ ಚಿಂತನೆಯಾಗಬೇಕಾದ ಅವಶ್ಯಕತೆಯಿದೆ. ಇಲ್ಲದಿದ್ದರೆ, ಅವರೇ ಕೃತಿಯ ಕೊನೆಯಲ್ಲಿ ಸೂಚ್ಯವಾಗಿ ತಿಳಿಸುವಂತೆ ಪ್ರಕೃತಿಯೇ ಮುನಿದು ಪ್ರಳಯ ರೂಪ ತಾಳುತ್ತದೆ. ಭೂಕಂಪವಾಗಿಯೋ, ನೆರೆಹಾವಳಿ ಪ್ರಕೋಪಕ್ಕೆ ಸಿಲುಕಿಯೋ ಇಲ್ಲವೇ ಕಾಡು ಪ್ರಾಣಿಗಳಿಗೆ ಬಲಿಯಾಗಿಯೋ, ಮಾನವಕುಲ ನಾಶವಾಗುವ ಪರಿಸ್ಥಿತಿ ಬರುತ್ತದೆ ಎಂಬ ಗಾಢ ನಿರೂಪಣೆಯು ನಾವು ಎಚ್ಚೆತ್ತುಕೊಳ್ಳಲು ಸಹಕಾರಿಯಾಗುತ್ತದೆ.

ನಮ್ಮ ಸುತ್ತಮುತ್ತಲಿನ ಪರಿಸರವು ದಟ್ಟ ರಮಣೀಯತೆಯಿಂದ ಕೂಡಿದ್ದು, ಇಂದು ಮಾನವನ ಅತಿಕ್ರಮಣ ಪ್ರವೃತ್ತಿಯಿಂದ ವಿನಾಶದ ಕಡೆಗೆ ಸಾಗುತ್ತಿರುವ ಬಗ್ಗೆ ಈ ಕಾದಂಬರಿಗಳಲ್ಲಿ ಗಮನಿಸಬಹುದಾಗಿದೆ. ಪರಿಸರದ ಅಂಶಗಳು ಮಾನವನ ದುರಾಸೆಗೆ ಬಲಿಯಾಗಿ ಒಂದಲ್ಲಾ ಒಂದು ದಿನ ಎಲ್ಲವನ್ನು ಚಿತ್ರಗಳಲ್ಲಿ ಸಿನಿಮಾ ಸಾಕ್ಷ್ಯಚಿತ್ರಗಳಲ್ಲಿ ನೋಡಬೇಕಾದ ಪರಿಸ್ಥಿತಿ ಉಂಟಾಗುವುದೇನೋ? ಪರಿವರ್ತನಾಶೀಲ ಜಗತ್ತಿನಲ್ಲಿ ಮಾನವನ ಸ್ವಾರ್ಥಕ್ಕೆ ಪರಿಸರವನ್ನು ನಾಶಗೊಳಿಸುತ್ತಾ, ಇರುವುದೊಂದು ಭೂಮಿಯನ್ನು ವಿನಾಶದ ಅಂಚಿಗೆ ತಳ್ಳಿ, ತನ್ನ ವಿನಾಶವನ್ನು ತಾನೇ ತಂದುಕೊಳ್ಳುವ ಮೃಗೀಯ ಪ್ರವೃತ್ತಿಯ ಬಗೆಗೆ ಎಲ್ಲರೂ ಆತ್ಮಾವಲೋಕನ ಮಾಡಿಕೊಳ್ಳಲೇಬೇಕಾಗಿದೆ ಎಂಬುದು ಇವರ ಕೃತಿಗಳ ಮುಖ್ಯ ಆಶಯವಾಗಿದೆ.

ಡಿಸೋಜರವರ ಕೃತಿಗಳಲ್ಲಿ ಶೋಷಣೆಯು ಕಂಡೂ ಕಾಣದಂತೆ ವ್ಯಕ್ತವಾಗುತ್ತದೆಯೇ ಹೊರತು ಅದು ಒಂದು ಪ್ರಬಲ ಮೂರ್ತ ರೂಪವನ್ನು ಪಡೆದುಕೊಳ್ಳುವುದಿಲ್ಲ. ಅಷ್ಟೇ ಅಲ್ಲ, ಅದು ಎಲ್ಲಿಯೂ ಬಂಡಾಯ ಸ್ವರೂಪ ಪಡೆದುಕೊಳ್ಳುವುದಿಲ್ಲ. ಅಂದ ಮಾತ್ರಕ್ಕೆ ಕಾದಂಬರಿಕಾರರು ಪ್ರಗತಿ ವಿರೋಧಿಯಲ್ಲ; ವಾಸ್ತವ ವಿಚಾರಗಳನ್ನು ಸೌಮ್ಯವಾಗಿ ಓದುಗರ ಮುಂದೆ ಮುಕ್ತ ಮನಸ್ಸಿನಿಂದ ತೆರೆದಿಡುವ ಪ್ರಾಮಾಣಿಕ ಪ್ರಯತ್ನ ಇವರದಾಗಿದೆ ಎನ್ನಬಹುದು. ಪ್ರಕೃತಿ, ಸಂಸ್ಕೃತಿಯ ಬಗ್ಗೆ ತೀವ್ರ ಕಳಕಳಿ, ಕಾಳಜಿ ಇದ್ದರೂ ಅದು ಸೌಮ್ಯತೆಯ ಪರದೆಯನ್ನು ಸರಿಸುವುದೇ ಇಲ್ಲ. ಮಾನವ ತನ್ನ ಸ್ವಾರ್ಥಕ್ಕಾಗಿ ಪ್ರಕೃತಿಯ ಮೇಲೆ ತನ್ನ ಜನಾಂಗದ ಮೇಲೆ ಎಸಗುವ ಶೋಷಣೆ, ಅತ್ಯಾಚಾರವನ್ನಷ್ಟೆ ಎತ್ತಿ ತೋರಿಸುತ್ತಾರೆ. “ದಲಿತರ ಬಗ್ಗೆ ಸಾಕಷ್ಟು ಬರೆದರೂ ಇವರನ್ನು “ದಲಿತ ಸಾಹಿತಿ” ಎಂದಾಗಲಿ ‘ಬಂಡಾಯ ಸಾಹಿತಿ’ ಎಂದಾಗಲಿ ಕರೆಯಲಿಲ್ಲ. ಕಟು ವಾಸ್ತವದ ಗಾಢತೆಯನ್ನು ಕಲಾತ್ಮಕವಾಗಿ

ಹಣೆಯುವಲ್ಲಿ ಡಿಸೋಜ ಅವರು ಇತರ ಎಲ್ಲಾ ಮುಸ್ಲಿಂ, ಕ್ರೈಸ್ತ, ಲೇಖಕರಿಗಿಂತ ಹೆಚ್ಚಾದ ಒಂದು ರಮ್ಯ ಪಚ್ಚೆಯನ್ನು ಹೊಂದಿದ್ದಾರೆ. ಬಹುಶಃ ಈ ಕಾರಣದಿಂದಲೇ ಇವರು ದಲಿತ ಬಂಡಾಯ ಮತ್ತಿತರ ಲೇಬಲ್‌ಗಳಿಗೆ ಬಾಧ್ಯಸ್ಥರಾಗಲಿಲ್ಲ"[7] ಎನ್ನುವ ಪಿಲಿಯಂ ಅವರ ಮಾತು ಸರಿಯೆನಿಸುತ್ತದೆ.

ಸುಮಾರು ಅರವತ್ತರ ದಶಕದಲ್ಲಿ ಬರೆಯಲು ಪ್ರಾರಂಭಿಸಿದ ಇವರ ಕಥೆಗಳಲ್ಲಿ ಸಾಂಸ್ಕೃತಿಕ ನೈಸರ್ಗಿಕ, ಧಾರ್ಮಿಕ, ಆರ್ಥಿಕ ಸ್ಥಿತ್ಯಂತರಗಳನ್ನು ಪ್ರಮುಖವಾಗಿ ಗುರಿತಿಸಬಹುದಾಗಿದೆ. ಇವರ ಕೆಲವು ಕಥೆಗಳು ಶಿವರಾಮಕಾರಂತರ ಕಥೆಗಳನ್ನು ನೆನಪಿಸಿದರೆ ಮತ್ತೆ ಕೆಲವು ತೇಜಸ್ವಿಯವರ ಕಥೆಗಳನ್ನು ನೆನಪಿಸುತ್ತದೆ. ಅಧ್ಯಯನದ ದೃಷ್ಟಿಯಿಂದ ಇಲ್ಲಿ ಪರಿಸರದ ಹಿನ್ನೆಲೆಯಲ್ಲಿ ರಚಿತವಾಗಿರುವಂತಹ ಕಾದಂಬರಿಗಳನ್ನು ಮಾತ್ರ ವಿವರವಾದ ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಆದರೂ ಅವರ ಇತರ ಸಾಹಿತ್ಯ ಕೃತಿಗಳನ್ನು ಸ್ಥೂಲವಾಗಿ ಅವಲೋಕಿಸುವುದು ಪ್ರಸ್ತುತವೆನಿಸಲು ಕಾರಣ ಬದುಕಿನ ಮೂಲ ಸೆಲೆಗಳಿಗೆ ಬದ್ಧರಾಗಿಯೇ ಸಾಹಿತ್ಯ ರಚಿಸಬೇಕಾದ ಅನಿವಾರ್ಯ ಕಾದಂಬರಿಕಾರನಿಗೆ ಇರುತ್ತದೆ. ಲೇಖಕನಾದವನು ತನ್ನ ಬರವಣಿಗೆಯ ಅಭಿವ್ಯಕ್ತಿಯಲ್ಲಿ ತನಗೆ ಅರಿವಿದ್ದೋ ಅಥವಾ ಇಲ್ಲದೆಯೋ ತನ್ನ ವೈಯಕ್ತಿಕ ಜೀವನ ಹಾಗೂ ಅನುಭವಗಳಿಂದ ಪ್ರಭಾವಿತನಾಗಿರುತ್ತಾನೆ. ತನ್ನ ಸಮಕಾಲೀನ ಸಾಮಾಜಿಕ, ಧಾರ್ಮಿಕ, ವಾಸ್ತವಿಕತೆಗಳನ್ನು ತನ್ನದೇ ಆದ ರೀತಿಯಲ್ಲಿ ಚಿಂತಿಸುವ ಲೇಖಕ, ತನ್ನ ಸುತ್ತಮುತ್ತಲಿನ ವ್ಯಾಪಾರವನ್ನು ಮರೆತು ಬರೆಯಲು ಸಾಧ್ಯವಿಲ್ಲ. ದಲಿತ ಸಾಹಿತಿಯಾಗಲಿ, ಮುಸ್ಲೀಂ ಲೇಖಕರಾಗಲಿ, ತಮ್ಮ ಜನಾಂಗದ ಸುಖ–ದುಃಖ ದುಮ್ಮಾನಗಳನ್ನು ಹಾಗೂ ತಮ್ಮ ಧಾರ್ಮಿಕ ವಿಚಾರಗಳನ್ನು ತಮ್ಮ ಲೇಖನದಲ್ಲಿ ಒಡಮೂಡಿಸಿದ್ದಾರೆ. ಕ್ರೈಸ್ತ ಧರ್ಮದ ಹಿನ್ನೆಲೆಯಲ್ಲಿ ಬಂದಿರುವ ಡಿಸೋಜರವರು ಸಹ ತಮ್ಮ ಧರ್ಮದ ಹಾಗೂ ಧಾರ್ಮಿಕ ಸಂಸ್ಥೆಗಳ ನ್ಯೂನ್ಯತೆಗಳನ್ನು ಎತ್ತಿ ತೋರಿಸಿದ್ದಾರೆ. ಆದರೆ ಅದು ಕ್ರೈಸ್ತ ಧರ್ಮದ ದೋಷಗಳು ಮಾತ್ರವಲ್ಲದೆ, ಎಲ್ಲಾ ಧರ್ಮಗಳಿಗೂ ಸಂಬಂಧಿಸಿದೆ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ಯೌವ್ವನದ ಪ್ರಾರಂಭದಲ್ಲಿ ಅದರ ಅವ್ಯವಸ್ಥೆಯ ಬಗ್ಗೆ ಅಸಮಾಧಾನವಿದ್ದರೂ. ವಯಸ್ಸಿನ ಪಕ್ವತೆಯೊಂದಿಗೆ ಕ್ರೈಸ್ತ ಬದುಕಿನ ರಚನಾತ್ಮಕ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಅನಂತರದ್ದು, ಅವರ ವೃತ್ತಿ ಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವಂತದ್ದು. ಲೋಕೋಪಯೋಗಿ ಇಲಾಖೆಯ ಕಬ್ಬಿಣ, ಸಿಮೆಂಟ್, ಕಲ್ಲು, ಮರಳು, ಜಲ್ಲಿ, ಅಣೆಕಟ್ಟು ನಿರ್ಮಾಣ ಇವುಗಳ ನಡುವೆ ಕುರ್ಚಿ, ಮೇಜು, ಫೈಲುಗಳ ಮೂಲಕವೇ ಅಲ್ಲಿನ ಸಮಸ್ತ ಆಂತರಿಕ ಬದುಕಿನ

ರಗಳನ್ನು ಗಮನಿಸಿ ಅಲ್ಲಿನ ಕಪ್ಪು ಬಿಳುಪು ವ್ಯವಹಾರವನ್ನು ತಮ್ಮ ಕೃತಿಗಳಲ್ಲಿ ಮೂಡಿಸುತ್ತಾ ರ್ತಮಾನ ಬದುಕಿನ ನೈಜ ಚಿತ್ರಣವನ್ನು ನೀಡಿದ್ದಾರೆ.

ತಮ್ಮ ಸುತ್ತಮುತ್ತಲಿನ ಪರಿಸರಕ್ಕೆ ಸಂಬಂಧಪಟ್ಟಂತಹ ದಟ್ಟ ರಮಣೀಯತೆಯನ್ನು ೊಂದಿದ್ದ ಪರಿಸರ, ಇಂದು ಮಾನವನ ಅತಿಕ್ರಮಣ ಪ್ರವೃತ್ತಿಯಿಂದ ವಿನಾಶದ ಕಡೆಗೆ ಾಗುತ್ತಿರುವುದರ ಬಗ್ಗೆ ವಿಷಾದವನ್ನು ಇವರ ಕಾದಂಬರಿಗಳಲ್ಲಿ ಗಮನಿಸಬಹುದಾಗಿದೆ. ನಸಂಪತ್ತು, ಜಲಸಂಪತ್ತು, ಮೃಗಸಂಪತ್ತು ಮಾತ್ರವಲ್ಲದೆ ಒಂದು ದಿನ ಪಕ್ಷಿ ಸಂಕುಲಗಳು ಾನವನ ದುರಾಸೆಯಿಂದ ನಶಿಸಿಹೋಗಿ, ಅವುಗಳನ್ನು ಕೇವಲ ಚಿತ್ರಗಳಲ್ಲಿ ಲೆಜೆಂಡ್ರಿ, ಸಿನಿಮಾ ಥವಾ ಸಾಕ್ಷ್ಯಚಿತ್ರಗಳಲ್ಲಿ ಮಾತ್ರ ನೋಡಬೇಕಾದ ಪರಿಸ್ಥಿತಿ ಉಂಟಾಗುವುದೇನೋ ? ಈ ರಿವರ್ತನಾಶೀಲ ಜಗತ್ತಿನಲ್ಲಿ ಬದುಕುತ್ತಿರುವ ಮಾನವ ಎಲ್ಲವನ್ನು ಪರಿವರ್ತಿಸುತ್ತಾ, ಾಶಗೊಳಿಸುತ್ತಾ ತನ್ನ ನೆಲ, ಜಲ, ಖನಿಜ ಇಂಧನಗಳ ನಿಕ್ಷೇಪವನ್ನು ವಿವೇಚನೆ ಇಲ್ಲದೆ ಬಳಿಸುತ್ತಾ ಇರುವುದೊಂದು ಭೂಮಿಯನ್ನು ವಿನಾಶದ ಅಂಚಿಗೆ ತಳ್ಳಿ, ತನ್ನ ವಿನಾಶವನ್ನು ತಾನೇ ಂದುಕೊಳ್ಳುವ ವಿಚ್ಛಿದ್ರಕಾರಿ ಪ್ರವೃತ್ತಿಯ ಬಗೆಗೆ ನಾವೆಲ್ಲರೂ ಇಂದು ಆತ್ಮಾವಲೋಕ ಮಾಡಿಕೊಳ್ಳಬೇಕಾಗಿದೆ ಎಂಬ ಅಂಶ ಇವರ ಕೃತಿಗಳಲ್ಲಿ ವ್ಯಕ್ತವಾಗುತ್ತದೆ.

ಪ್ರಸ್ತುತ ನಿಬಂಧದಲ್ಲಿ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಸ್ಥಾನ ಕಾದಂಬರಿಯ ವಸ್ತು, ತಂತ್ರ, ಭಾಷೆಯ ಕುರಿತು ಚರ್ಚಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಡಿಸೋಜರವರ ಪರಿಸರಕ್ಕೆ ಸಂಬಂಧಿಸಿದಂತೆ ಆಯ್ದುಕೊಂಡಿರುವ ಕಾದಂಬರಿಗಳನ್ನು ವಿಮರ್ಶಾತ್ಮಕವಾಗಿ ನೋಡಲಾಗಿದೆ. ನಂತರದ ಕಾದಂಬರಿಗಳಲ್ಲಿ ಸ್ಥಿತ್ಯಂತರಗಳ ಕುರಿತು ಚರ್ಚಿಸಲಾಗಿದೆ. ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕವಾಗಿ ಯಾವ ರೀತಿಯಲ್ಲಿ ಸ್ಥಿತ್ಯಂತರಗಳನ್ನು ಕಾಣಬಹುದು ಎಂದು ಚರ್ಚಿಸಲಾಗಿದೆ. ಆರನೇ ಅಧ್ಯಾಯದಲ್ಲಿ ಕಾದಂಬರಿಗಳಿಗೆ ಸಂಬಂಧಿಸಿದಂತೆ ಗಂಡು ಹೆಣ್ಣಿನ ಸಂಬಂಧಗಳನ್ನು ಕುರಿತು ಚರ್ಚಿಸಲಾಗಿದೆ. ಅದರಲ್ಲಿ ಕಾದಂಬರಿಗಳ ಶೀರ್ಷಿಕೆ ಹಾಗೂ ಹೆಸರುಗಳ ಔಚಿತ್ಯವನ್ನು ಕುರಿತು ಚರ್ಚಿಸಲಾಗಿದೆ.

ಡಿಸೋಜರವರ ಕೃತಿಗಳಲ್ಲಿ ಆಧುನಿಕತೆಯ ಸೋಂಕೇ ಇಲ್ಲದೆ, ಪ್ರಶಾಂತ ಜೀವನ ನಡೆಸುತ್ತಿರುವ ಪ್ರದೇಶಗಳಿಗೆ ಕೈಗಾರಿಕೋದ್ಯಮಿಗಳು ಪ್ರವೇಶಿಸಿದಾಗ ಅಲ್ಲಿ ಉಂಟಾಗುವ ಸ್ಥಿತ್ಯಂತರಗಳನ್ನು ಗುರುತಿಸಬಹುದಾಗಿದೆ. ಉದ್ಯಮ, ರಸ್ತೆ ವಾಹನಗಳು ಪ್ರವೇಶಿಸುವಂತೆ, ಹಣವೂ ಪ್ರವೇಶ ಪಡೆದು ಕರ್ಖಾನೆಗಳಂತಹ ಉದ್ದಿಮೆಗಳು ಉಗುಳುವ ಗಂಧಕ, ಇಂಗಾಲದ

ಡೈಆಕ್ಸೈಡ್‌ಗಳು, ಹವಾಮಾನ, ವಾತಾವರಣವನ್ನು ಕಲುಷಿತಗೊಳಿಸುವುದರಿಂದ ಹಿಡಿದು, ಕಾರ್ಖಾನೆಗಳು ಹೊರಹಾಕುವ ತ್ಯಾಜ್ಯ ವಸ್ತುಗಳು, ವಾತಾವರಣದಲ್ಲಿ, ನೀರಿನಲ್ಲಿ ಬೆರೆತು ಮುಗ್ಧ ಜನರ ಆರೋಗ್ಯವನ್ನು ಹೇಗೆ ಹಾಳುಮಾಡುತ್ತವೆ ಎಂಬುದನ್ನು ಇದರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಜೊತೆಗೆ ಹಣದ ಪ್ರವೇಶದಿಂದ, ಮನುಷ್ಯ ಶ್ರಮದಿಂದ ಫಲ ತೆಗೆಯುವಂತಹ ಕೆಸಲಗಳಿಂದ ಜಾರಿಕೊಂಡು ಸುಲಭವಾಗಿ ಜೀವನ ಮಾಡುವ, ವ್ಯಾಪಾರೋದ್ಯಮ ದ್ರೋಹ ವಂಚನೆಗಳಿಂದ ಒಬ್ಬರನ್ನೊಬ್ಬರು ಕೆಳಗೆಳೆಯುವ ಕಾರ್ಯಗಳಲ್ಲಿ ನಿರತರಾಗಿರುವ ಮಾನವ ಪ್ರವೃತ್ತಿಗಳು ಹೆಚ್ಚಾಗಿ ಕಂಡುಬರುತ್ತವೆ.

ಡಿಸೋಜರವರು ತಮ್ಮ ಕಥೆ ಕಾದಂಬರಿಗಳಲ್ಲಿ ವಸ್ತುವಿಗಾಗಿ ಪರದಾಡದೆ, ತಮ್ಮ ಸುತ್ತಲೇ ಇರುವ ಕಾಡು, ಕಾಡಿನ ಹೂವು, ಜಲಪಾತ, ಅಣೆಕಟ್ಟು, ಕಬ್ಬಿಣ ಸಿಮೆಂಟು, ಚರ್ಚು ಇವುಗಳಿಗೆ ತಮ್ಮ ಲೇಖನಿಯ ಮೂಲಕ ರೂಪಕೊಟ್ಟಿದ್ದಾರೆ. ಅಲ್ಲಿರುವ ಬದುಕಿನ ಮೌಲ್ಯಗಳನ್ನು ಎತ್ತಿಹಿಡಿದಿದ್ದಾರೆ. ಇವರ ಕಾದಂಬರಿಗಳಲ್ಲಿ ಬರುವ ಕಾಡು, ಹೂವು, ನದಿ, ನೀರು ಕೇವಲ ಭೌತಿಕ ವಸ್ತುಗಳಾಗದೆ ಸಾಂಸ್ಕೃತಿಕ ಜಗತ್ತಿನ ಪಳೆಯುಳಿಕೆಗಳ ಕೊಂಡಿಯಾಗಿ ಇರುವುದನ್ನು ಕಾಣಬಹುದಾಗಿದೆ. ಋತುಮಾನಕ್ಕೆ ತಕ್ಕಂತೆ ಪರಿಸರದಲ್ಲಿ ಬದಲಾವಣೆಗಳಾದರೆ ಅದು ಜೀವಂತಿಕೆಯ ಲಕ್ಷಣವಾಗುತ್ತದೆ. ಆದರೆ, ಮಾನವನ ಕೈವಾಡದಿಂದ ಅದರಿಂದ ಉಂಟಾಗುವ ಒಳಿತುಗಳಿಗಿಂತ ಕೆಡುಕೇ ಹೆಚ್ಚು. ಬದಲಾವಣೆ ಬದುಕಿಗೆ ಅನಿವಾರ್ಯ ಆದರೆ ಅದು ಜೀವನಕ್ಕೆ ಮುಳುವಾಗಬಾರದೆನ್ನುವ ಧೋರಣೆ ಡಿಸೋಜರವರ ಕಾದಂಬರಿಗಳ ಪ್ರಮುಖ ಆಶಯವಾಗಿದೆ. ಆಧುನಿಕತೆ ಮನುಷ್ಯನಲ್ಲಿರುವ ಮಾನವೀಯ ಮೌಲ್ಯಗಳನ್ನು ನಾಶಪಡಿಸಿ, ಕ್ರೌರ್ಯ, ಶೋಷಣೆ, ಸ್ವಾರ್ಥ ದುರಾಶೆಯನ್ನು ಮನುಷ್ಯನಲ್ಲಿ ಉಂಟು ಮಾಡುತ್ತಿದೆ ಎನ್ನುವುದನ್ನು ಈ ಕಾದಂಬರಿಗಳು ನಿರೂಪಿಸುತ್ತವೆ. ಒಟ್ಟಿನಲ್ಲಿ ಇವರ ಕಾದಂಬರಿಗಳಲ್ಲಿರುವ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಪ್ರಾದೇಶಿಕ ಸ್ಥಿತ್ಯಂತರಗಳನ್ನು ಅಧ್ಯಯನದ ಮಿತಿಯಲ್ಲಿ ಗುರುತಿಸುವುದೇ ಈ ನಿಬಂಧದ ಉದ್ದೇಶವಾಗಿದೆ.

## ಅಡಿ ಟಿಪ್ಪಣಿಗಳು

೧. ನಾ.ಡಿಸೋಜ ಅಭಿನಂದನ ಗ್ರಂಥ ವಿಲಿಯಂ ಸೂಕ್ಷ್ಮ ಸ್ತರಗಳ ಸಮರ್ಥ ಲೇಖಕ ಪುಟ – ೬೦.

# ಅಧ್ಯಾಯ - ೨

## ಅ. ಕನ್ನಡ ಕಾದಂಬರಿಗಳು – ಒಂದು ಅವಲೋಕನ

ನಾ. ಡಿಸೋಜರವರ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರದ ಅಧ್ಯಯನ ಎಂಬ ಪ್ರಸ್ತುತ ವಿಷಯವು ಸಾಮಾಜಿಕ, ಸಾಂಸ್ಕೃತಿಕ ಸ್ಥಿತ್ಯಂತರವನ್ನು ಕೆಲವು ಕಾದಂಬರಿಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದಾಗಿದ್ದರೂ, ಇಲ್ಲಿ ಕನ್ನಡ ಕಾದಂಬರಿಯ ಹುಟ್ಟು ಬೆಳವಣಿಗೆ ಬಗ್ಗೆ ಒಂದು ಅವಲೋಕನ ಮಾಡಲಾಗಿದೆ.

ಮಾನವನು ಮೊದಲು ತನ್ನ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಚಿಂತನೆ ನಡೆಸಿದ. ಅನಂತರ ಅವನು ಬೌದ್ಧಿಕ ವಿಕಸನಕ್ಕಾಗಿ ಯೋಚಿಸತೊಡಗಿದ. ಇದರ ಪರಿಣಾಮವಾಗಿಯೇ ಕಲೆ ಮತ್ತು ಸಾಹಿತ್ಯಗಳ ಉಗಮವಾಯಿತು. ತನ್ನ ಇಂದ್ರಿಯಗಳಿಗೆ ನಿಲುಕದ ಅನೇಕ ವಿಚಾರಗಳನ್ನು ಪ್ರಕೃತಿಯಲ್ಲಿ ಗಮನಿಸಿದ. ಆಗ ಪ್ರಕೃತಿಯ ಒಂದೊಂದು ಅಂಶವು ಅದ್ಭುತವಾಗಿ ಗೋಚರಿಸಿತು. ಆ ಅಂಶಗಳಿಗೆ ಒಂದು ರೂಪವನ್ನು ಕೊಟ್ಟು ಅಭಿವ್ಯಕ್ತಿಸತೊಡಗಿದ ಪ್ರಕೃತಿಯ ಬದಲಾವಣೆಯೊಂದಿಗೆ ಮಾನವನ ಯೋಚನಾಲಹರಿ ವಿಕಸನಗೊಂಡು, ಅದ್ಭುತ ಸೃಜನಶೀಲತೆ ಮೂಡಿಬರಲು ಸಹಾಯಕವಾಯಿತು.

ಕಾಲಕ್ರಮೇಣ ಆದಿಮಾನವನ ಮಾತುಗಳು ಭಾವಾಭಿವ್ಯಕ್ತಿಯ ಮಾಧ್ಯಮವಾಗುತ್ತಿದ್ದಂತೆ ಆತ ತನ್ನೊಳಗೆ ಸಂಬಂಧಗಳನ್ನು ರಚಿಸಿಕೊಂಡ. ಸಂಬಂಧಗಳ ಆಳವನ್ನು ಕುರಿತು ಯೋಚಿಸುವಾಗ ಆನಂದ, ದುಃಖ, ಆಸೆ, ನಿರಾಶೆ, ಉದ್ರೇಕ, ಉದ್ಗಾರಗಳು ಸ್ವಯಂ ಸ್ಫೂರ್ತಿಯಿಂದ ಉದಿಸಿರಬಹುದು. ನಂತರ ಮಾನವನ ಅನುಭವ ಬೆಳೆದು ಪದಸಂಪತ್ತು ಹೆಚ್ಚಿದಂತೆ ಗೀತೆಗಳು ಉದಯಿಸಿದವು. ಆಗ ತಮ್ಮ ಅಂತರ್ಗತ ಅನುಭವಗಳನ್ನು ಪರಿಣಾಮಕಾರಿಯಾಗಿ ಅವರ ಬುದ್ಧಿಶಕ್ತಿ, ಕಲಾನೈಪುಣ್ಯತೆ ಬಳಸಿ ನಾಟಕ ರೂಪವಾಗಿ ಗೀತೆಯ ಮೂಲಕ ಹೊರಹಾಕತೊಡಗಿರಬಹುದು. ಮಾತನಾಡಲು ಅರಿತ ಮಾನವ ತಾನು ಇತರರೊಂದಿಗೆ ತನ್ನ ವಿಷಯ ಭಾವನೆಗಳನ್ನು ಅಥವಾ ಇನ್ನಾರದ್ದೋ ವಿಷಯವನ್ನು ಮಾತನಾಡಬೇಕೆಂದಾಗ, ಮನೋಹರವಾಗಿ ಚಿತ್ತಾಕರ್ಷಕವಾಗಿ ಹೇಳಲು ತೊಡಗಿದಾಗ ಅದು ಕಥೆಯ ರೂಪ ತಾಳಿರಬಹುದು.

ಕನ್ನಡ ಸಾಹಿತ್ಯದಲ್ಲಿ ಕಥೆ ಹೇಳುವ ಪದ್ಧತಿ ಬಹಳ ಹಿಂದೆಯೇ ಪ್ರಚಲಿತದಲ್ಲಿರುವುದನ್ನು ಕಾಣಬಹುದಾಗಿದೆ. ಕಥಾವಸ್ತುವನ್ನೊಳಗೊಂಡ ಕಾವ್ಯ ಕೃತಿಗಳೆಂದರೆ ನೇಮಿಚಂದ್ರನ 'ಲೀಲಾವತಿ ಪುರಾಣ', ದುರ್ಗಸಿಂಹನ 'ಪಂಚತಂತ್ರ', ಜನ್ನನ 'ಯಶೋಧರ ಚರಿತ್ರೆ', ಶಿವಕೋಟ್ಯಾಚಾರ್ಯನ

ವಡ್ಡಾರಾಧನೆ' ಇತ್ಯಾದಿ. ಈ ಕೃತಿಗಳಲ್ಲಿ ಬರುವ ಕಥಾ ಪ್ರಸಂಗಗಳು ತುಂಬಾ ಕುತೂಹಲಕಾರಿಯಾಗಿವೆ. ಮುದ್ದಣ ರಚಿಸಿರುವ ರಾಮಾಶ್ವಮೇಧವೂ ಸಹ ಕಥೆಯೇ ಆಗಿದೆ. ಆದರೆ ಈ ಕೃತಿಗಳನ್ನು ಕಾದಂಬರಿ, ಎಂದು ಕರೆಯಲಾಗದು. ಮುಂದೆ ಕಥೆಯ ರೂಪವನ್ನೇ ಸ್ವಲ್ಪ ವಿಸ್ತೃತಗೊಳಿಸಲಾಯಿತು. ಅದೇ ಕಾದಂಬರಿಯ ಉಗಮಕ್ಕೆ ಕಾರಣವಾಯಿತು.

ಆಧುನಿಕ ಸಾಹಿತ್ಯ ಪ್ರಕಾರದಲ್ಲಿ ಜನಪ್ರಿಯ ಪ್ರಕಾರವೇ ಕಾದಂಬರಿ. ಪ್ರಾಚೀನ ಸಾಹಿತ್ಯದಲ್ಲಿನ ಮಹಾಕಾವ್ಯ ಪ್ರಕಾರದಂತೆ ಇಂದಿನ ಕಾದಂಬರಿ ಪ್ರಕಾರ 'ಆಧುನಿಕ ಯುಗದ ಮಹಾಕಾವ್ಯ ಕಾದಂಬರಿ'. ಇಂಗ್ಲೀಷ್‌ನ 'Fiction' ಕ್ರಮೇಣ 'ನಾವೆಲ್' ಆಗಿ ರೂಪಗೊಂಡಿದ್ದೇ ಕನ್ನಡದ ಕಾದಂಬರಿ ಪ್ರಕಾರವಾಗಿದೆ. ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗೆ ಒಂದು ಶತಮಾನದಷ್ಟು ಇತಿಹಾಸವಿದೆ. ಇಂಗ್ಲೀಷ್‌ನ 'ನಾವೆಲ್' ಅನ್ನುವುದಕ್ಕೆ ಹೊಸತು ನವೀನ ಎನ್ನುವ ಅರ್ಥವಿದೆ. ಈ ಹೊಸ ಸಾಹಿತ್ಯ ಪ್ರಕಾರಕ್ಕೆ ಕಾದಂಬರಿ ಎಂದು ಅರ್ಥೈಸಬಹುದು.

ಕಾದಂಬರಿ ಗದ್ಯ ಸಾಹಿತ್ಯ ಪ್ರಕಾರಗಳಲ್ಲಿಯೇ ವಿಶಿಷ್ಟವಾದುದು. ಈ ಕಾದಂಬರಿ ಪ್ರಕಾರ ಹುಟ್ಟಿಕೊಂಡಿದ್ದು ಕೈಗಾರೀಕರಣದ ಸಂದರ್ಭದಲ್ಲಿ. ಯೂರೋಪಿನಲ್ಲಾದ ಕೈಗಾರಿಕಾ ಕ್ರಾಂತಿ ಅಲ್ಲಿನ ಸಾಂಸ್ಕೃತಿಕ ದಿಕ್ಕನ್ನೇ ಬದಲಾಯಿಸಿತು. ಹೆಚ್ಚು ವಾಸ್ತವತೆಗೆ ಬೆಲೆ ನೀಡಬೇಕು. ಜನಸಾಮಾನ್ಯರಿಗೆ ಹೆಚ್ಚಿನ ವಿಚಾರ ತಿಳಿಯಬೇಕೆಂಬ ಅಪೇಕ್ಷೆ ಇದ್ದ ಆ ಕಾಲದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಿಂದ ಜನರ ಮನೋಭಾವ ಬದಲಾಗುತ್ತಾ ಬಂದಿತು. ಕಾರ್ಲ್‌ಮಾರ್ಕ್ಸ್, ಎಂಜಲ್ಸ್, ಸಿಗ್ಮಂಡ್‌ಫ್ರಾಯ್ಡ್, ಡಾರ್ವಿನನ ವಿಚಾರಧಾರೆಗಳ ಪರಿಣಾಮವಾಗಿ ಸಾಹಿತ್ಯದಲ್ಲಿ ಹೊಸ ಪ್ರಕಾರವೊಂದು ಹುಟ್ಟಲೇಬೇಕಾಯಿತು. ಹೀಗೆ ಆಧುನಿಕತೆಗೂ ಕಾದಂಬರಿ ಪ್ರಕಾರದ ಉಗಮಕ್ಕೂ ಹತ್ತಿರದ ಸಂಬಂಧವಿದೆ. ಆಧುನೀಕರಣದ ಸಂದರ್ಭದಲ್ಲುಂಟಾದ ಎಲ್ಲಾ ಕ್ಷೇತ್ರದ ವಿಷಯಗಳನ್ನು ಕಾದಂಬರಿ ಒಳಗೊಂಡಿತು.

"ಈ ಪರಿಸ್ಥಿತಿಯನ್ನು ನಿಭಾಯಿಸಲು ಸಂಕ್ರಮಣ ಕಾಲದ ದ್ವಂದ್ವಗಳನ್ನು ಹಿಡಿಯಲು ಚಲನಶೀಲ ಜಗತ್ತಿನ ದಿಕ್ಕು ದೆಸೆಗಳನ್ನು ದಾಖಲಿಸಲು ಹೊಸ ಪ್ರಕಾರವೊಂದನ್ನು ಲೇಖಕ ಅನ್ವೇಷಿಸಿಕೊಳ್ಳಬೇಕಾಯಿತು. ಕಾದಂಬರಿ ಪ್ರಕಾರದ ಉಗಮ ಮತ್ತು ಬೆಳವಣಿಗೆಯ ಹಿಂದಿನ ಪ್ರಧಾನ ಪ್ರೇರಣೆ ಇದು"[5] ಎಂಬ ಮಾತನ್ನು ಗಮನಿಸಬಹುದು.

ಈ ಆಧುನಿಕತೆಯು ತೃತೀಯ ಜಗತ್ತಿಗೆ ಕಾಲಿರಿಸಿದ್ದು ವಸಾಹತೀಕರಣದ ಸಂದರ್ಭದಲ್ಲಿ. ಬದಲಾದ ಸಮಾಜದ ರೂಪುರೇಷೆಯಲ್ಲಿ ಸಾಹಿತ್ಯ ಪ್ರಕಾರ ಅನೇಕ ದ್ವಂದ್ವಗಳನ್ನು ಎದುರಿಸಿತು. ಏಕೆಂದರೆ ವಸಾಹತುಶಾಯಿಯ ಮೂಲಕ ಆಧುನಿಕತೆಯ ಮೌಲ್ಯಗಳನ್ನು ಸ್ವೀಕರಿಸಬೇಕೋ ಬೇಡವೋ ಎಂಬ ದ್ವಂದ್ವ ಇರುವುದರಿಂದ ಸಮಾಜವು ಬಹಳ ಸಮಸ್ಯೆ ಎದುರಿಸಬೇಕಾಯಿತು. "ವಸಾಹತುಶಾಹಿ ಅನುಭವದ ಜೊತೆಗೆ ಆಮದಾದ ಆಧುನಿಕತೆಯು ವೈಚಾರಿಕ ಪ್ರಣಾಳಿಕೆಯನ್ನು ನಿರ್ದೇಶಿಸಿತು. ಇದು ಸಾಂಪ್ರದಾಯಿಕ ಸಮಾಜದ ಪಲ್ಲಟಕ್ಕೆ ಕಾರಣವಾಯಿತು. ವಸಾಹತುಶಾಹಿಯ ಅನುಭವವೂ ಈ ಕಾರಣದಿಂದ ಒಂದು ರಾಜಕೀಯ ತಂತ್ರಗಾರಿಕೆಯನ್ನು ರೂಪಿಸಿದ್ದರಿಂದ ಸಹಜವಾಗಿಯೇ ಅದರ ಸ್ಥಳೀಯ ಸಂಸ್ಕೃತಿಯು ಭಿನ್ನ ನೆಲೆಯಲ್ಲಿ ಪ್ರತಿಕ್ರಿಯಿಸಿತು." [೨]

ಪಾಶ್ಚಾತ್ಯರು ನಮ್ಮ ನಾಡನ್ನು ಆಳುವ ಸಂದರ್ಭದಲ್ಲಿ ಅವರ ಪ್ರಭಾವ ನಮ್ಮ ರಾಜಕೀಯವಲಯದ  ಮೇಲಾಯಿತು. ಅಷ್ಟೇ ಅಲ್ಲದೆ ಆಚಾರ-ವಿಚಾರ, ನಡೆ-ನುಡಿ, ಸಂಸ್ಕೃತಿ ಹಾಗೂ ನಮ್ಮ ಸಾಮಾಜಿಕ ಸಂರಚನೆಯ ಮೂಲಭೂತ ವಿಚಾರಗಳ ಮೇಲೂ ಪ್ರಭಾವ ಬೀರಿದರು. ಪಾಶ್ಚಾತ್ಯ ಸಂಪರ್ಕದಿಂದ ನಮ್ಮ ವಿದ್ಯಾಭ್ಯಾಸ ಪದ್ಧತಿಯಲ್ಲಿ ಬದಲಾವಣೆ ಕಂಡು ಬಂದಿತು. ಇವರ ಶಿಕ್ಷಣ ಪದ್ಧತಿಯಿಂದಾಗಿ ದೇಸೀ ಶಿಕ್ಷಣದ ಮೇಲೆ ಭಾರೀ ಹೊಡೆತ ಬಿದ್ದಿತು. ಈ ಎಲ್ಲಾ ಸಂದರ್ಭಗಳನ್ನು ಜನರು ಎದುರಿಸುವಂತಹ ಪರಿಸ್ಥಿತಿ ಬಂದಿತು. ನಮ್ಮದು ವೈವಿಧ್ಯತೆಯಿಂದ ಕೂಡಿದ ಸಂಸ್ಕೃತಿಯಾಗಿದ್ದು, ಜನರ ಪ್ರತಿಕ್ರಿಯೆಯು ವಿವಿಧತೆಯಿಂದಲೇ ಕೂಡಿದೆ. ಇವರ ವಿವಿಧ ರೀತಿಯ ಭಾವನೆಗಳ ಗುಚ್ಚವನ್ನು ತಮ್ಮ ಕೃತಿಗಳ ಮೂಲಕ ಒಡಮೂಡಿಸಿರುವುದನ್ನು ನಾವು ಕಾಣಬಹುದಾಗಿದೆ. ಹೀಗಾಗಿ ಕಾದಂಬರಿ ಪ್ರಕಾರವು ಹುಲುಸಾಗಿ ಬೆಳೆಯಲು ಸಹಾಯಕವಾಯಿತು. ಕನ್ನಡಕ್ಕೆ ಕಾದಂಬರಿಯು ಆಂಗ್ಲ ಸಾಹಿತ್ಯ ಅನುವಾದಗಳ ಮೂಲಕ ಬಂದಿದೆ. ಈ ಮೊದಲು ಕನ್ನಡದಲ್ಲಿ ಕಾದಂಬರಿಗಳು ಇದ್ದಿರಬಹುದು ಎಂಬ ಸಾಧ್ಯತೆಯನ್ನು ನಾವು ತಳ್ಳಿ ಹಾಕುವಂತಿಲ್ಲ. ದೇಸೀ ಹಿನ್ನಲೆಯಿಂದ ಗಮನಿಸುವುದಾದರೆ ಕೆಂಪು ನಾರಾಯಣನ 'ಮುದ್ರಾಮಂಜೂಷ' ಕೃತಿಯು ಕಾಂದಬರಿ ರಚನೆಗೆ ಬೇಕಾದ ವಿನ್ಯಾಸವನ್ನು ಸೂಚಿಸಿದ ಮೊದಲ ಗ್ರಂಥವಾಗಿದೆ. ಇದಕ್ಕೆ  ಮೊದಲು ಸಂಸ್ಕೃತ ಮತ್ತು ಕನ್ನಡ ಮಹಾಕಾವ್ಯಗಳ ಕಥಾನಕ ರೂಪಗಳು ಬಳಕೆಗೆ ಬಂದಿದ್ದವು.

ಕನ್ನಡ ಕಾದಂಬರಿಯ ಪರಂಪರೆ ಐತಿಹಾಸಿಕ ಕಾದಂಬರಿಗಳ ಅನುವಾದದ ಮೂಲಕ ಪ್ರಾರಂಭವಾಯಿತು. ಬಿ. ವೆಂಕಟಾಚಾರ್ಯ ಮತ್ತು ಗಳಗನಾಥರು ಕ್ರಮವಾಗಿ ಬಂಗಾಳಿ ಹಾಗೂ

ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟರು. ಇವರ ಮುಖ್ಯ ಉದ್ದೇಶ ಕಾದಂಬರಿ ಪ್ರಕಾರವೊಂದರ ಬಗ್ಗೆ ಓದುಗರಲ್ಲಿ ಆಸಕ್ತಿ ಮೂಡಿಸುವುದಾಗಿತ್ತು.

“ಕನ್ನಡದ ಮೊದಲ ಕಾದಂಬರಿಕಾರರ ಪ್ರಯತ್ನ ಕೇವಲ ಪ್ರಯೋಗಶೀಲವಾದುದು. ಏಕೆಂದರೆ ಒಂದೆಡೆ ಸಾಹಿತ್ಯ ಪ್ರಕಾರವೊಂದನ್ನು ಪರಿಚಯಿಸುವ ಆಶಯವಿದ್ದರೆ ಮತ್ತೊಂದೆಡೆ ಆ ಪ್ರಕಾರದಲ್ಲಿ ಒಲವು ತೋರುವ ಓದುಗ ವರ್ಗವನ್ನು ಸಿದ್ಧಮಾಡುವ ಮಹತ್ವಾಕಾಂಕ್ಷೆಯಿತ್ತು. ಸಂದರ್ಭದಲ್ಲಿ ಬರೆಯುವವರ ಸಂಖ್ಯೆ ಕಡಿಮೆ ಇದ್ದು ಓದುವವರ ಸಂಖ್ಯೆಯನ್ನು ಬೆಳೆಸಿದ ಪ್ರಕಾರವೆಂದರೆ ಕಾದಂಬರಿ. ಮುಂದೆ ಬಹುತೇಕ ಪ್ರಮುಖ ಬರಹಗಾರರು ಈ ಹಿನ್ನೆಲೆಗಳನ್ನು ಗಮನದಲ್ಲಿಟ್ಟುಕೊಂಡೇ ಅನೇಕ ಪ್ರಯೋಗಗಳನ್ನು ಮಾಡಿದರು”. [೩]

ಕನ್ನಡ ಕಾದಂಬರಿ ಸಂದರ್ಭದಲ್ಲಿ ಪೌರಾಣಿಕ ಕಾದಂಬರಿಗಳು ಬೆರಳೆಣಿಕೆಯಲ್ಲಿ ಮಾತ್ರ ಇದ್ದವು ಜನರೊಂದಿಗೆ ನೇರ ಸಂಬಂಧ ಇಟ್ಟುಕೊಂಡು ಕಾದಂಬರಿ ಪ್ರಕಾರ ಬೆಳೆಯಲು ಪ್ರಾರಂಭವಾದ್ದರಿಂದ ವಾಸ್ತವ ಮಾರ್ಗದ ಕಾದಂಬರಿಗಳನ್ನು ಆಕರ್ಷಿಸಿದಂತೆ ಪೌರಾಣಿಕ ಕಾದಂಬರಿಗಳು ಅಷ್ಟು ಆಕರ್ಷಿಸಲಿಲ್ಲ.

ಕನ್ನಡ ಕಾದಂಬರಿಯ ಆರಂಭಿಕ ದೆಸೆಯಲ್ಲಿ ಐತಿಹಾಸಿಕ ಕಥಾನಕಗಳು ಹೆಚ್ಚು ಬಂದವು. ಸರಳವಾದ ನಿರೂಪಣಾ ಶೈಲಿಯಲ್ಲಿ ಕಥೆ ಹೇಳುವುದು ಅವುಗಳ ಮುಖ್ಯ ಉದ್ದೇಶವಾಗಿತ್ತು. ಐತಿಹಾಸಿಕ ಕಾದಂಬರಿಗಳಿಗೆ ಬಂಕಿಮಚಂದ್ರರು, ಗಳಗನಾಥರು, ಇವರುಗಳ ಕಾದಂಬರಿಗಳು ಪ್ರೇರಣೆಯಾದರೆ ಸಾಮಾಜಿಕ ಕಾದಂಬರಿಗೆ ಶರತ್‌ಚಂದ್ರ ಹಾಗೂ ರವೀಂದ್ರನಾಥ ಟಾಗೂರರ ಕೃತಿಗಳು ಸಾಮಾಜಿಕ ಕಾದಂಬರಿಗೆ ಪ್ರೇರಣೆಯನ್ನಿತ್ತವು.

ಸಾಮಾಜಿಕ ಕಾದಂಬರಿಗಳು ಆಯಾ ಕಾಲಘಟ್ಟದ ಜನರೊಂದಿಗೆ ಸ್ಪಂದಿಸುತ್ತಾ ಸಫಲವಾಗಿ ಬೆಳೆದು ಬಂದಿವೆ. ಆಂಗ್ಲ ಕಾದಂಬರಿಗಳಿಂದ ಪಾಶ್ಚಾತ್ಯ ಸಂಸ್ಕೃತಿ, ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪ್ರಭಾವಿತಗೊಂಡ ನಮ್ಮ ಲೇಖಕರು ಅದರ ಅನುಕರಣೆಯನ್ನೇ ಪ್ರಾರಂಭದ ಕಾದಂಬರಿಯಲ್ಲಿ ಮಾಡಿದ್ದಾರೆ. ಸಮಾಜಕ್ಕೆ ಆಧುನಿಕ ಮೌಲ್ಯದ ಸಂಪರ್ಕದಿಂದ ಅತಿ ರಭಸದ ಚಲಶೀಲತೆ ಉಂಟಾಯಿತು. “ಧಾರ್ಮಿಕ ಅತಿರೇಕಗಳನ್ನು ಖಂಡಿಸುವುದರ ಮೂಲಕ ಇಂಗ್ಲಿಷ್ ಶಿಕ್ಷಣದ ವ್ಯಾಮೋಹವನ್ನು ಕಾಣುತ್ತೇವೆ”[೪] ಎಂಬ ಮಾತನ್ನು ಇಲ್ಲಿ ಗಮನಿಸಬಹುದು. ಅಲ್ಲದೇ

ಸುಧಾರಣಾವಾದಿಗಳಾದ ರಾಜಾರಾಮ್ ಮೋಹನ್‌ರಾಯ್, ದಯಾನಂದ ಸರಸ್ವತಿ ಮುಂತಾದವರ ವಿಚಾರದ ಪ್ರಭಾವವೂ ಸಮಾಜಿಕ ಕಾದಂಬರಿ ರಚಿಸಲು ಪ್ರೇರಣೆ ನೀಡಿತು.

ಕನ್ನಡ ಸಾಹಿತ್ಯವನ್ನು ನಾಲ್ಕು ಕಾಲಘಟ್ಟಗಳಾಗಿ ವಿಭಜಿಸಿ ಅಧ್ಯಯನ ಮಾಡುವ ಕ್ರಮವಿದೆ. ಅವುಗಳೆಂದರೆ ನವೋದಯ, ಪ್ರಗತಿಶೀಲ, ನವ್ಯ ಹಾಗೂ ದಲಿತ ಬಂಡಾಯ. ಸ್ವಾತಂತ್ರ್ಯ ಪೂರ್ವದಲ್ಲಿ ಕುವೆಂಪುರವರ 'ಕಾನೂನು ಹೆಗ್ಗಡತಿ' ಶಿವರಾಮ ಕಾರಂತರ 'ಮರಳಿ ಮಣ್ಣಿಗೆ', 'ಚೋಮನ ದುಡಿ', ದೇವುಡುರವರ 'ಅಂತರಂಗ' ಮುಂತಾದ ಗಮನಾರ್ಹ ಕೃತಿಗಳು ಬಂದವು. ಇವುಗಳನ್ನು ನವೋದಯ ಕಾದಂಬರಿಗಳೆಂದು ಕರೆಯಲಾಗಿದೆ.

ನವೋದಯ ಲೇಖಕರು ವ್ಯಕ್ತಿ ಮತ್ತು ಸಮಾಜದ ಮಧ್ಯೆ ಏರ್ಪಡುವ ಸೌಹಾರ್ದ ಸಂಬಂಧದ ಕಡೆಗೆ ಗಮನ ಹರಿಸಿದರು. ಆದರ್ಶ ಕನಸಿನ ನೆಲೆಗಳಲ್ಲಿ ಸಮಾಜದ ಪರವಾಗಿದ್ದ ಕಾಳಜಿ ಇಲ್ಲಿ ಎದ್ದು ಕಾಣುತ್ತದೆ.

೧೯೪೦-೫೦ರ ಸುಮಾರಿನಲ್ಲಿ ಆರಂಭಗೊಂಡ ಪ್ರಗತಿಶೀಲ ಚಳುವಳಿಯಿಂದಾಗಿ ಕನ್ನಡ ಕಾದಂಬರಿ ಕ್ಷೇತ್ರ ಬೆಳವಣಿಗೆ ಹೊಂದಿತು. ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಹೋರಾಟ ಜನರಲ್ಲಿ ರಾಷ್ಟ್ರಪ್ರೇಮವನ್ನು ಹೆಚ್ಚಿಸುವಂತಹ ಕಾದಂಬರಿಗಳು ರಚನೆಯಾದವು. ನವೋದಯಕ್ಕೆ ಭಿನ್ನವಾದ ಒಂದು ಹೊಸ ಮಾರ್ಗ ರೂಪುಗೊಂಡಿದ್ದರಿಂದ ವಾಸ್ತವ ಮಾರ್ಗದ ಕಾದಂಬರಿಗಳು ರಚನೆಯಾದವು. ಅ.ನ.ಕೃ. ಬಸವರಾಜ ಕಟ್ಟೀಮನಿ, ತ.ರಾ.ಸು, ಮುಂತಾದವರು ಈ ನಿಟ್ಟಿನಲ್ಲಿ ಬರೆದ ಪ್ರಮುಖ ಕಾದಂಬರಿಕಾರರು. ಇವರು ಪರಂಪರಾಗತ ಮೌಢ್ಯವನ್ನು ರೂಢಿಸಿಕೊಂಡು ಬಂದಿದ್ದ ಸಾಹಿತ್ಯವನ್ನು ಖಂಡಿಸಿದರು. ಅವರಿಗೆ ರಷ್ಯಾದ ಕಮ್ಯೂನಿಸಂ ಧೋರಣೆಗಳು ಸರಿ ಕಂಡವು. ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯನ್ನು ತರಬೇಕು ಎನ್ನುವ ಒಂದು ಸಮೂಹ ನಿಷ್ಠ ಚಿಂತನಾ ಕ್ರಮವನ್ನು ಪ್ರಗತಿಶೀಲರು ಅನುಸರಿಸಿದರು. ಶನಿಸಂತಾನ (ಅ.ನ.ಕೃ) 'ಜರತಾರಿ ಜಗದ್ಗುರು' (ಬಸವರಾಜ ಕಟ್ಟಿಮನಿ) 'ಚಿರಸ್ಮರಣೆ' (ನಿರಂಜನ) ಇತ್ಯಾದಿ, ಕಾದಂಬರಿಗಳಲ್ಲಿ ಪ್ರಗತಿಶೀಲ ದೋರಣೆ ಕಂಡುಬರುತ್ತದೆ.

೧೯೫೦ರ ವೇಳೆಗೆ ನವ್ಯ ಕಾದಂಬರಿಗಳ ಯುಗ ಆರಂಭವಾಯಿತು. "ಬದುಕಿನ ಸಂಬಂಧಗಳು ಬದಲಾಗುವ ಬಣ್ಣಗಳನ್ನು ಬಿಚ್ಚಿಡಲು ಕಾದಂಬರಿ ಅತ್ಯುತ್ತಮ ಮಾಧ್ಯಮ"[೫] ಹೀಗಾಗಿ ಕಾದಂಬರಿ ಪ್ರಕಾರದಲ್ಲಿ ಕಾಲಕಾಲಕ್ಕೆ ತಕ್ಕಂತೆ ಹೊಸ-ಹೊಸ ಆವಿಷ್ಕಾರಗಳು ನಡೆದಿವೆ. ಜಾಗತಿಕ

ಮಟ್ಟದಲ್ಲಿ ನಡೆದ ಅನೇಕ ಆಧುನಿಕ ಚಿಂತನೆಗಳು ಎರಡು ಮಹಾಯುದ್ಧಗಳು, ೧೯೪೭ರಲ್ಲಿ ಭಾರತಕ್ಕೆ ಸ್ವತಂತ್ರ ಬಂದ ಮೇಲೆ ಜನರಲ್ಲಿ ಉಂಟಾದ ನಿರಾಶೆ ಭ್ರಮನಿರಸನ, ಅರ್ಥ ಕಳೆದುಕೊಂಡ ಹಳೆಯ ಮೌಲ್ಯಗಳು, ಬದಲಾದ ಮನೋಧರ್ಮ ಇವು ಸಾಹಿತಿಗಳಿಗೆ ಹೊಸ ಸಿದ್ಧಾಂತಗಳನ್ನು ರೂಪಿಸಿಕೊಳ್ಳಲು ಅನುವುಮಾಡಿಕೊಟ್ಟವು. ಆಗ ರೂಪುಗೊಂಡ ಅಸಂಗತತೆ, ಅಸ್ತಿತ್ವವಾದಗಳು ಸಾಹಿತ್ಯದ ಸ್ವರೂಪ ವಿನ್ಯಾಸಗಳನ್ನು ಬದಲಿಸಿದವು. ಸ್ವಾರ್ಥ, ರಾಜಕಾರಣ, ಭ್ರಷ್ಟಾಚಾರ, ಗುಂಪುಗಾರಿಕೆ ಇವುಗಳು ಸಮಾಜದಲ್ಲಿ ತಲೆದೋರಿ ಬದುಕು ಸಂಕೀರ್ಣತೆಯತ್ತ ಸಾಗಿತು.

ಎರಡನೇ ಮಹಾಯುದ್ಧದ ನಂತರ ಬೇರೆ, ಬೇರೆ ದೇಶಗಳಿಂದ ಭಾರತಕ್ಕೆ ಆಮದಾದ ಕೃತಿಗಳ ಮೂಲಕ ಹೊಸ ಹೊಸ ಜ್ಞಾನಶಾಖೆಗಳು ಪರಿಚಯಗೊಂಡವು. ಇಂಗ್ಲೆಂಡ್ ಮತ್ತು ಅಮೇರಿಕಾಕ್ಕೆ ಸಾಹಿತ್ಯ ಮತ್ತು ಭಾಷಾ ವಿಜ್ಞಾನದ ಅಧ್ಯಯನಕ್ಕಾಗಿ ಅನೇಕ ಮಂದಿ ತೆರಳಿದರು. ಈ ಬಗೆಯ ಸಂಪರ್ಕದಿಂದಾಗಿ ಸಾಹಿತ್ಯೇತರ ಕೃತಿಗಳ ಕಡೆ ಹೆಚ್ಚಿನ ಕುತೂಹಲ ಮೂಡಿತು. ಕಾಮು, ಕಾಫ್ಕ, ಸಾರ್ತ್ರೆ ಮುಂತಾದ ಚಿಂತಕರ ಪ್ರಭಾವಕ್ಕೆ ನಮ್ಮ ನವ್ಯ ಸಾಹಿತ್ಯ ಒಳಗಾಯಿತು. ಫ್ರಾಯ್ಡ್, ಎರಿಕ್ ಫ್ರಾಮ್‌ರಂಥ ಮನ ಶಾಸ್ತ್ರಜ್ಞರು, ಫ್ರೇಜರ್, ಲೆವಿಸ್ಟ್ರಾಸ್‌ರಂತಹ ಮಾನವಶಾಸ್ತ್ರಜ್ಞರು, ಟಿ.ಎಸ್.ಎಲಿಯಟ್, ಐ.ಎ. ರಿಚರ್ಡ್ಸ್‌ರಂಥಹ ವಿಮರ್ಶಕರು ಕನ್ನಡದ ಮೇಲೂ ಪ್ರಭಾವ ಬೀರಿದರು. ಅಡಿಗರ ಕಾವ್ಯ ಪ್ರಯೋಗಕ್ಕೆ ಬಂದ ಈ ಚಿಂತನೆಗಳು ಕ್ರಮೇಣ ಗದ್ಯಕ್ಕೂ ಕಾಲಿಟ್ಟಿತು.

ಶಾಂತಿನಾಥ ದೇಸಾಯಿಯವರ 'ಮುಕ್ತಿ'ಯನ್ನು ಮೊದಲನೆ, ನವ್ಯ ಕಾದಂಬರಿ ಎಂದು ಕರೆಯಲಾಗಿದೆ. ನಂತರ ಕೆ.ಪಿ. ಅಯ್ಯರ್‌ರವರ 'ರೂಪದರ್ಶಿ', ಯಶವಂತ ಚಿತ್ತಾಲರ 'ಶಿಕಾರಿ', ಲಂಕೇಶರ 'ಬಿರುಕು', ಮುಂತಾದ ಕಾದಂಬರಿಗಳು ಪ್ರಮುಖವಾದವು. ಇವರ ಕಾದಂಬರಿಗಳಲ್ಲಿ ಅಳವಡಿಸಿಕೊಂಡ ತಂತ್ರ, ಭಾಷೆ, ವಸ್ತುವಿನಲ್ಲಿಯೂ ನವ್ಯತೆ ಕಾಣಬಹುದು. ಆದರೆ ಇವರ ಸಾಹಿತ್ಯದ ಸಂಕೀರ್ಣತೆಯೇ ಜನಸಾಮಾನ್ಯರನ್ನು ಆಕರ್ಷಿಸದೆ ಸೀಮಿತ ಓದುಗ ವರ್ಗವನ್ನು ಸೃಷ್ಟಿಸಿಕೊಂಡಿತು.

ನವ್ಯ ಮಾರ್ಗವನ್ನು ಬಿಟ್ಟು ವಾಸ್ತವಿಕ ದಾಟಿಯಲ್ಲಿ ಕಾದಂಬರಿ ರಚಿಸಿದ ಎಸ್.ಎಲ್. ಭೈರಪ್ಪನವರ ಹೆಸರು ಕಾದಂಬರಿ ಪ್ರಪಂಚದಲ್ಲಿ ಪ್ರಮುಖವಾದ ಸ್ಥಾನವನ್ನು ಗಿಟ್ಟಿಸಿಕೊಂಡಿದೆ. ೧೯೬೭ರ ಸುಮಾರಿನಲ್ಲಿ ಮಹಾರಾಷ್ಟ್ರದಲ್ಲಿ ಆರಂಭಗೊಂಡ ದಲಿತ ಸಾಹಿತ್ಯ ಚಳುವಳಿ ಕನ್ನಡ ದಲಿತ ಬರಹಗಾರರಿಗೆ ಮುಖ್ಯ ಪ್ರೇರಣೆಯಾಯಿತು. ಇದರ ಜೊತೆ ಮಾರ್ಕ್ಸ್‌ವಾದ, ಅಂಬೇಡ್ಕರವಾದ, ಲೋಹಿಯಾವಾದ, ದಲಿತ ಸಾಹಿತ್ಯ ರೂಪುಗೊಳ್ಳಲು ಸಹಕರಿಸಿದವು. ಸಾಮಾಜಿಕ ಅಸಮಾನತೆಯ ವಿರುದ್ಧ ಬಂಡೇಳುವ ಆಶಯವನ್ನು ಹೊಂದಿರುವ ಬಂಡಾಯ ಸಾಹಿತ್ಯ ನವ್ಯದ ವಿರುದ್ಧವೂ

ಬಂಡೆದ್ದು, ಅದು ಜನ ಸಾಮಾನ್ಯರಿಗೆ ಅರ್ಥವಾಗುವಂತಿರಬೇಕು ಎಂಬ ಕಾರಣದಿಂದ ಈ ಕಾಲಘಟ್ಟದ ಸಾಹಿತಿಗಳು ಭಾಷೆಯನ್ನು ಸರಳಗೊಳಿಸಿದರು. ಮೇಲ್ವರ್ಗದವರಿಂದ ಶೋಷಣೆಗೆ ಒಳಗಾದ ಜನರ ದನಿಯಾಗಿ ದಲಿತ ಸಾಹಿತ್ಯ ಮೂಡಿಬಂದಿತು. ಹಾಗೆಯೇ ಜನಪರ ಮೌಲ್ಯಗಳನ್ನು ಪ್ರಗತಿಪರ ವಿಚಾರಗಳನ್ನು ಸಹ ಈ ಪ್ರಕಾರ ಪ್ರತಿಪಾದಿಸಿತು. ಈ ನಿಟ್ಟಿನಲ್ಲಿ ಸೂರ್ಯ, ಒಂದು ಊರಿನ ಕಥೆ (ಬರಗೂರು ರಾಮಚಂದ್ರಪ್ಪ) ಮಾಗಿ (ಮ.ನ. ಜವರಯ್ಯ) ಕ್ರೌರ್ಯ (ಅರವಿಂದ ಮಾಲಗತ್ತಿ) ಕಪ್ಪು (ಕುಂ.ವಿ) ಒಡಲಾಳ ಹಾಗೂ ಕುಸುಮ ಬಾಲೆ (ದೇವನೂರು ಮಹಾದೇವ) ಮುಂತಾದವರ ಕಾದಂಬರಿಗಳನ್ನು ಹೆಸರಿಸಬಹುದು.

ಹೀಗೆ ಸಮಾಜದ ಬದಲಾವಣೆಗೆ ಸ್ಪಂದಿಸುತ್ತಾ ವಿವಿಧ ಕಾಲಘಟ್ಟಗಳಲ್ಲಿ ಕನ್ನಡ ಕಾದಂಬರಿ ಪ್ರಕಾರ ಹುಲುಸಾಗಿ ಬೆಳೆದು ಬಂದಿದೆ. ಕಾದಂಬರಿ ಯಾವ ಮಾರ್ಗದ್ದು ಎಂಬುದು ಮುಖ್ಯವಾಗದೇ ಅದು ಕಟ್ಟಿಕೊಡುವ ಜೀವನ ಮೌಲ್ಯವು ಮುಖ್ಯವಾಗುತ್ತದೆ. ಕಾದಂಬರಿ ಕ್ಷೇತ್ರಕ್ಕೆ ಕನ್ನಡದಲ್ಲಿ ಮಹಿಳಾ ಕಾದಂಬರಿಕಾರ್ತಿಯರ ಕಾಣಿಕೆ ಬಹಳ ಇದೆ. ತ್ರಿವೇಣಿ, ಎಂ. ಕೆ. ಇಂದಿರಾ, ಅನುಪಮಾ ನಿರಂಜನರಂತಹ ಜನಪ್ರಿಯ ಕಾದಂಬರಿಕಾರ್ತಿಯರು ಉತ್ತಮ ಕಾದಂಬರಿ ರಚಿಸಿದ್ದಾರೆ. ಸ್ತ್ರೀ ಸಂವೇದನೆಗಳನ್ನು ಇವರ ಕಾದಂಬರಿಯಲ್ಲಿ ಕಾಣಬಹುದು.

### ಆ) ಕಾದಂಬರಿಕಾರರಾಗಿ ನಾ. ಡಿಸೋಜ

'ನಾಡಿ', ಎಂದು ಸುಪರಿಚಿತರಾದ ನಾ. ಡಿಸೋಜರವರು ಸೌಜನ್ಯಮೂರ್ತಿ. ಮೃದುವಾದ ನಡಾವಳಿಗಳಿಂದ ಎಲ್ಲರನ್ನು ಆಕರ್ಷಿಸಿರುವವರು. ದಾಕ್ಷಿಣ್ಯ ಪ್ರವೃತ್ತಿ, ಪ್ರತಿಭೆ ಇದ್ದರೂ ತನ್ನಲ್ಲಿ ಇದೆ ಎಂದು ತೋರಿಸಿಕೊಳ್ಳದ ಸಂಭಾವಿತ. ಪ್ಯಾಂಟುಧಾರಿ, ಕೈ ತುಂಬಾ ತೋಳಿನ ಷರಟು, ಉದ್ದನೆಯ ಕ್ರಾಪು, ತೆಳುವಾದ ಶರೀರ, ಸ್ನೇಹಿತರೊಡನೆ ಕಲೆಯುವ ಸ್ವಭಾವ, ಸಾದಾತನ, ಹಸನ್ಮುಖಿ, ಸೌಮ್ಯ ಪುರುಷ ಹಾಗೆಯೇ ಪತ್ನಿ ಮಕ್ಕಳೊಂದಿಗೆ ಸಂತಸದಿಂದ ಬದುಕು ಸಾಗಿಸುತ್ತಿರುವ ಸಾರ್ಥಕ ಜೀವನ ಅವರದಾಗಿದೆ. ಇವು 'ನಾಡಿ' ಅವರ ವ್ಯಕ್ತಿತ್ವದ ವಿವರಗಳಾಗಿವೆ.

ಯಾವುದೇ ಧರ್ಮದ ಬಗ್ಗೆ ಅತಿಯಾದ ಅಭಿಮಾನವನ್ನು ಬೆಳೆಸಿಕೊಳ್ಳದ ನಾ. ಡಿಸೋಜ ಅವರು ವೈಯಕ್ತಿಕವಾಗಿ ಧರ್ಮ ನಿರಪೇಕ್ಷ ಮನೋವೃತ್ತಿಯವರು. ಮಾನವೀಯತೆಯ ಆರಾಧಕರೂ ಆಗಿದ್ದಾರೆ. ಇವರ ಜೀವನಾನುಭವವನ್ನು ಪ್ರತಿಬಿಂಬಿಸುವ ಕೃತಿಯ 'ಪ್ರತಿಯೊಂದು ಸಾಲು'? ಮಾನವ ಪ್ರೇಮದ ಪ್ರತೀಕ. ಪ್ರತಿ ಧರ್ಮದ ಉತ್ತಮ ಗುಣಗಳನ್ನು ನೋಡುವಂತೆಯೇ ಕೆಟ್ಟ

ಗುಣಗಳನ್ನು ಗಾಢವಾಗಿ ಗಮನಿಸುವವರು. ಹೀಗಾಗಿ ಧರ್ಮ, ಜಾತಿ, ಪ್ರಸಂಗಳಿಂದ ದೂರ ನಿಂತು ತನ್ನ ಸಮಾಜದ ಬಗ್ಗೆ ಜವಾಬ್ದಾರಿ ಅರಿತು, ಸಾಹಿತ್ಯ ರಚಿಸುವ ಜಾಯಮಾನ ಬೆಳೆಸಿಕೊಂಡವರು. ಜೀವನವನ್ನು ತಾಳ್ಮೆ, ಪ್ರೀತಿ, ಸ್ನೇಹ ಸರಳತೆಗಳಿಂದ, ರೂಪಿಸಿಕೊಂಡು ಸ್ವಂತ ಶಕ್ತಿಯಲ್ಲಿ ನಂಬಿಕೆ ಇಟ್ಟುಕೊಂಡು ಉತ್ತಮ ಜೀವನ ನಡೆಸಲು ಸಾಧ್ಯ ಎಂದು ತೋರಿಸಿಕೊಟ್ಟವರು.

"ಪರಂಪರಾಗತ ನಂಬಿಕೆಗಳನ್ನು ವೈಭವೀಕರಿಸದೆ, ಮಾನವೀಯತೆಯನ್ನು ಎತ್ತಿ ಹಿಡಿದು, ವೈಚಾರಿಕತೆಯನ್ನು ಪ್ರಚೋದಿಸುತ್ತಾ, ದೇಶ-ಕಾಲದ ಅವಶ್ಯಕತೆಗಳನ್ನು ಅರಿತು, ನಾವಿನ ಚಿಂತನೆಗಳನ್ನು ಅಳವಡಿಸಿ, ವೈಜ್ಞಾನಿಕ ಮನೋಭಾವಗಳನ್ನು ಬೆಳೆಸುವಂತೆ ಸಾಮಾಜಿಕ ಜವಾಬ್ದಾರಿಗೆ ಬದ್ಧವಾಗಿ ಬರೆಯುವ ಗಟ್ಟಿ ಬರಹಗಾರ ನಾ. ಡಿಸೋಜ ಮನಸ್ಸಿನಲ್ಲಿ ಹೆಪ್ಪುಗಟ್ಟಿದ, ಚಿಂತನ ಮಂತನಕ್ಕೊಳಗಾಗಿಸಿದ ವಸ್ತು ವಿಷಯವನ್ನು ಒಂದೇ ಬಾರಿಗೆ ಬರವಣಿಗೆಯಲ್ಲಿ ಬಟ್ಟಿ ಇಳಿಸುವ ನೈಜ ಸಾಹಿತಿ. ಇವರ ಸುತ್ತಲಿನ ಪರಿಸರ, ಅಲ್ಲಿ ನಡೆದ, ನಡೆಯುತ್ತಿರುವ ಘಟನೆಗಳೇ ಇವರ ಸಾಹಿತ್ಯಕ್ಕೆ ಸ್ಪೂರ್ತಿ, ತಮ್ಮ ಸುತ್ತಮುತ್ತಲ ಅಪೂರ್ವ ಶಬ್ದ ಸಂಪತ್ತನ್ನು ಹಿಡಿದಿಟ್ಟ ಮಣ್ಣಿನ ಮಗ, ವಸ್ತು ಸ್ಥಿತಿಯ ಬಗೆಗೆ ನಿಷ್ಠುರ ನಿಶ್ಚಿತತೆ ಬೆಳೆಸಿಕೊಂಡವರು".[1]

ಈ ಮೇಲಿನ ಅಂಶಗಳೇ ಡಿಸೋಜರವರ ಸಮಗ್ರ ಬದುಕಿನ ಚಿತ್ರಣ ಒದಗಿಸುತ್ತದೆ. "ಮತೀಯ ವಿಷಯಗಳ ಬಗೆಗಿನ ಅತೀವವಾದ ಮೋಹ ಯಾರಿಗೂ ಸಲ್ಲದು. ನಾವು ಮಾನವೀಯತೆಯನ್ನು ಬಲಿಕೊಟ್ಟು ಮತವನ್ನೋ ದೇವರನ್ನೋ ಉದ್ದಾರ ಮಾಡುತ್ತೇವೆ ಅನ್ನುವುದು ಮೂರ್ಖತನ. ಮನುಷ್ಯ ಉಳಿದರಷ್ಟೆ ಧರ್ಮಕ್ಕೂ, ದೇವರಿಗೂ ಬೆಲೆ"[2] ಎಂದು ನಾ. ಡಿಸೋಜರವರೇ ಒಂದು ಕಡೆ ಹೇಳುತ್ತಾರೆ. ಈ ಅಂಶ ಅವರ ಬರಹದ ಸಾರವೂ ಆಗಿದೆ. ನಾ. ಡಿಸೋಜರವರು ಸುಮಾರು ಅರವತ್ತರ ದಶಕದಲ್ಲಿ ಬರಹಗಳನ್ನು ಪ್ರಾರಂಭಿಸುತ್ತಾರೆ. ನಿಸರ್ಗಪ್ರೀತಿಯ ಬರಹಗಾರರೆಂದೇ ಕರೆಯಬಹುದಾದ ಇವರು ಕಾದಂಬರಿಗಳಲ್ಲಿ ಅಗಾಧವಾದ ಪರಿಸರ ಪ್ರೀತಿ, ಪರಿಸರಪ್ರಜ್ಞೆ, ಪರಿಸರ ಕಾಳಜಿ, ಪರಿಸರವನ್ನು ಉಳಿಸಬೇಕೆಂಬ ತವಕವನ್ನು ಕಾಣಬಹುದಾಗಿದೆ. ಸಾಹಿತ್ಯ ಕ್ಷೇತ್ರದಲ್ಲಿ ಭಿನ್ನವಾದ ಮೌನ ಸಂದೇಶವನ್ನು ಅವರು ತಮ್ಮ ಕೃತಿಗಳಲ್ಲಿ ರೂಪಿಸಿದ್ದಾರೆ. ಏಕೆಂದರೆ ಕೇವಲ ಪ್ರಚಾರಕರಾಗಿ, ಕೀರ್ತಿಯಾಕಾಂಕ್ಷಿಗಳಾಗಿ ಅರಣ್ಯ ಸಂಪತ್ತಿನ ನಾಶದ ಬಗ್ಗೆ ಹುಸಿ ಪ್ರತಿಭಟನೆ ಮಾಡುತ್ತಾ ಪತ್ರಿಕೆಗಳಲ್ಲಿ, ರಾಜಕೀಯ ರಂಗದಲ್ಲಿ ಇವರು ಕಾಣಿಸಿಕೊಳ್ಳುವುದಿಲ್ಲ.

ಹಲವಾರು ಕಾದಂಬರಿಗಳನ್ನು ಬರೆದು ನಾಡಿನಲ್ಲೆಲ್ಲಾ ಜನಪ್ರಿಯರಾಗಿರುವ ಡಿಸೋಜರವರ ಸಾಹಿತ್ಯವನ್ನು ಪ್ರಮುಖವಾಗಿ ಮೂರು ಘಟ್ಟಗಳಲ್ಲಿ ಗುರುತಿಸಬಹುದಾಗಿದೆ.

1. ಕ್ರೈಸ್ತ ಜನಾಂಗಕ್ಕೆ ಸಂಬಂಧಪಟ್ಟ ವಿವರಗಳು
2. ವೃತ್ತಿ ಜೀವನಕ್ಕೆ ಸಂಬಂಧಪಟ್ಟ ವಿವರಗಳು
3. ಆ ಪ್ರದೇಶದ ಪರಿಸರಕ್ಕೆ ಸಂಬಂಧಪಟ್ಟ ವಿವರಗಳು

ಕ್ರೈಸ್ತ ಧರ್ಮಕ್ಕೆ ಸಂಬಂಧಪಟ್ಟ ಅವರ ಕೃತಿಗಳು ಆ ಜನಾಂಗದ ರೀತಿ ರಿವಾಜುಗಳಿಗೆ, ನೀತಿ ಅನೀತಿಗಳಿಗೆ, ಸುಖ ದುಃಖಗಳಿಗೆ, ಆಚಾರ ವಿಚಾರಗಳಿಗೆ ಹಿಡಿದ ಕನ್ನಡಿಯಾಗಿದೆ. ಹಾಗೆಯೇ ವೃತ್ತಿ ಜೀವನಕ್ಕೆ ಸಂಬಂದಪಟ್ಟಂತೆ ಲೋಕೋಪಯೋಗಿ ಇಲಾಖೆಯ ಕಾಮಗಾರಿಯಲ್ಲಿ ನಡೆಯುವ ಮೋಸ, ಅಮಾನವೀಯ ಶೋಷಣೆಯ ಸ್ವಂತ ಅನುಭವದ ಸಾರದ ವಿಶ್ಲೇಷಣೆ ಇದೆ. ಪರಿಸರಕ್ಕೆ ಸಂಬಂಧಪಟ್ಟ ವಿವರಗಳಲ್ಲಿ ಗಿಡ, ಮರ, ಬಳ್ಳಿಗಳು, ಬೆಳತೊರೆ, ಆಣೆಕಟ್ಟುಗಳ ನಿರ್ಮಾಣದಿಂದ ಹಳ್ಳಿ-ಹಳ್ಳಿಗಳೇ ಮುಳುಗಡೆಯಾಗಿ ನೆಲೆ ತಪ್ಪುವ ಅಲ್ಲಿನ ಜನಸಮುದಾಯದ ಗೋಳಿನ ಚಿತ್ರಣವಿದೆ. 'ಬಂಜೆ ಬೆಂಕಿ' ಎಂಬ ಮೊದಲ ಕಾದಂಬರಿಯನ್ನು ೧೯೭೪ರಲ್ಲಿ ಬರೆಯುವುದರ ಮೂಲಕ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ಬರವಣಿಗೆಯ ಮುಖಾಂತರ ಗುರುತಿಸಿಕೊಂಡರು. ಅಷ್ಟೊತ್ತಿಗಾಗಲೇ ಸಣ್ಣ ಕಥೆಯನ್ನು ಬರೆದು ಹೆಸರು ವಾಸಿಯಾಗಿದ್ದ ಇವರು ಸುಮಾರು ಮೂವತ್ತೈದಕ್ಕೂ ಹೆಚ್ಚು ಕಾದಂಬರಿಯನ್ನು ರಚಿಸಿದ್ದಾರೆ. ಜೀವನ ಚರಿತ್ರೆ, ಜಾನಪದ ಸಂಗ್ರಹ, ನಾಟಕ, ಮಕ್ಕಳ ಸಾಹಿತ್ಯ ಹೀಗೆ ಎಲ್ಲಾ ಪ್ರಕಾರದಲ್ಲೂ ಕೆಲಸ ಮಾಡಿದ್ದಾರೆ. ಇವರ ಕೆಲವಾರು ಕೃತಿಗಳು ಇಂಗ್ಲೀಷ್, ತಮಿಳು, ತೆಲುಗು, ಮಲಯಾಳಂ, ಹಿಂದಿ ಮತ್ತು ಕೊಂಕಣಿ ಭಾಷೆಗಳಿಗೆ ಅನುವಾದಗೊಂಡಿವೆ. ಇವರ ಬರಹಗಳು ಕನ್ನಡದ ದಿನಪತ್ರಿಕೆ, ವಾರಪತ್ರಿಕೆ, ಮಾಸ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈಗಲೂ ಪ್ರಕಟಗೊಳ್ಳುತ್ತಿರುವುದನ್ನು ಕಾಣಬಹುದಾಗಿದೆ.

ಸಾಗರ ತೀರ್ಥಹಳ್ಳಿಗಳ ಹಿಂದುಳಿದ ಬುಡಕಟ್ಟು ಜನಾಂಗವಾದ ಹಸಲರ ಬದುಕನ್ನು ಸಮಗ್ರವಾಗಿ ಚಿತ್ರಿಸಿದ ಕೃತಿ 'ಮಂಜಿನಕಾನು' ಮತ್ತು 'ಶಿವನ ಡಂಗುರ' ಎಂಬ ಗಂಭೀರ ಸಾಮಾಜಿಕ ಕಾದಂಬರಿಯನ್ನು ರಚಿಸಿದ್ದಾರೆ. ಶಿವಮೊಗ್ಗ ಜಿಲ್ಲೆಯ ಆಸುಪಾಸಿನಲ್ಲಿನ ಐತಿಹಾಸಿಕ ಘಟನೆಗಳ ಅಭ್ಯಾಸವನ್ನೊಳಗೊಂಡ ಕೃತಿಗಳೆಂದರೆ 'ಶೃಂಗೇರಿಯಲ್ಲಿ ಶಾಂತಿ', 'ಇಕ್ಕೇರಿಯಲ್ಲಿ ಕ್ರಾಂತಿ' ಹಾಗೂ 'ರಾಗ ವಿರಾಗ'. ಇವರು ಮಕ್ಕಳಿಗೆಂದೇ ರಚಿಸಿದ ಕೃತಿಗಳು ಹೆಚ್ಚು ಮೌಲ್ಯಯುತವಾಗಿವೆ. ಹಾಗೆಯೇ ಇವರ 'ಕಾಡಿನ ಬೆಂಕಿ' 'ದ್ವೀಪ' ಕೃತಿಗಳು ಚಲನಚಿತ್ರಗಳಾಗಿವೆ. ಗಂಭೀರ ವಿಷಯಗಳನ್ನು ಕಥೆಗಳ

ೂಪದಲ್ಲಿ ಸೆರೆ ಹಿಡಿದು, ಸಹೃದಯದ ಮನಮಿಡಿಯುವಂತೆ ನಾ.ಡಿ.ಸೋಜರವರು ತಮ್ಮ ತಿಗಳಲ್ಲಿ ವಿಭಿನ್ನವಾಗಿ ಮೂಡಿಸಿದ್ದಾರೆ. ‘ತಾನು ಒಂದು ಜೀವಂತ ಸಮುದಾಯದ ಜೀವಂತ ಂಗ’ ಎಂದು ನಂಬಿದ್ದ ಅವರು ವಿವಿಧ ವಿಷಯ, ವಿಭಿನ್ನ ಕಥಾನಕಗಳ ಮೂಲಕ ಮಲೆನಾಡಿನಿಂದ ರಾವಳಿಯ ತನಕ ಸ್ಥಳ ಐತಿಹ್ಯಗಳನ್ನು ಬಳಸಿಕೊಂಡು ಮೊದಲಿಗೆ ಆ ಸ್ಥಳಗಳಲ್ಲಿ ಇದ್ದ ೀವಂತಿಕೆ, ಜೀವ ಬಂತು ಜಾಲಗಳ ಸಮತೋಲನಗಳು ಆ ಕಾಲದಲ್ಲಿ ಆ ಸ್ಥಳಗಳಲ್ಲಿನ ಜನರ ಾತ್ವಿಕ ಸ್ವಭಾವ–ಸಂಸ್ಕೃತಿ–ಸಂಸ್ಕಾರಗಳನ್ನು ಚಿತ್ರಿಸಿದ್ದಾರೆ.

## ಅಡಿ ಟಿಪ್ಪಣಿಗಳು

೧. ಅಶೋಕ ಟಿ.ಪಿ. ಸಾಹಿತ್ಯ ಸಂದರ್ಭ ಪುಟ – ೧
೨. ಡಾ. ಕುಮಾರ ಚಲ್ಯ, ಹಿಂದಣ ಹೆಜ್ಜೆಯನರಿಯದೆ – ಪುಟ – ೫೧
೩. ಡಾ. ಕೇಶವ ಶರ್ಮ, ಶಬ್ದ ರೇಖೆ, ಪುಟ ೨೯
೪. ಅಶೋಕ ಟಿ.ಪಿ. ಸಾಹಿತ್ಯ ಸಂದರ್ಭ ಪುಟ – ೪
೫. ವಿಜಯಶ್ರೀ ಕೆ. ನವ್ಯ ಸಾಹಿತ್ಯ ಪುಟ – ೧೪೬
೬. ಜೆಕೋಬ್ ಲೋಬೋ ಸಿ.ಹೆಚ್ಚ (ಸಂ) – ನಾ.ಡಿಸೋಜ ಅಭಿನಂದನ ಸಂಪಾದಕೀಯ
೭. ಡಾ. ಚಂದ್ರಶೇಖರ ಕಂಬಾರ–ಸೃಜನಶೀಲ ನಾ.ಡಿಸೋಜ ಅಭಿನಂದನ, ಪುಟ–೩

## ಅಧ್ಯಾಯ – ೩

## ಕಾದಂಬರಿಗಳ ವಸ್ತು ತಂತ್ರ ಭಾಷೆ

ಸಾಹಿತ್ಯ ಎಂಬುದು ಲೇಖಕನ ವಿವಿಧ ಅನುಭವಗಳನ್ನು ಕಲಾತ್ಮಕವಾಗಿ ಅಭಿವ್ಯಕ್ತಿಸುವ ಮವಾಗಿದೆ. ಹಲವು ಬಿಡಿಬಿಡಿ ಪಾತ್ರಗಳನ್ನು ಒಂದುಗೂಡಿಸಿ ಅದಕ್ಕೊಂದು ಸಾವಯವ ಂಬಂಧವನ್ನು ಕಲ್ಪಿಸುವುದು ಲೇಖಕನ ಕೆಲಸವಾಗಿದೆ. ಒಬ್ಬ ಸೃಜನಶೀಲ ಲೇಖಕ ತಾನು ಕಂಡ, ಅನುಭವಿಸಿದ ಅಥವಾ ಕಾಲ್ಪನಿಕವಾಗಿ ರೂಪಿಸಿಕೊಂಡ ಘಟನೆಯನ್ನು ಅಭಿವ್ಯಕ್ತಿಸಲು ಒಂದು ಮಾಧ್ಯಮಬೇಕು. ಆ ರೀತಿಯಲ್ಲಿ ಅಭಿವ್ಯಕ್ತಿಸಲು ಆತ ಕಥೆ, ಕಾಂದಬರಿ ಇತ್ಯಾದಿ ಯಾವ ಮಾಧ್ಯಮವನ್ನು ಬೇಕಾದರೂ ಆಯ್ದುಕೊಳ್ಳಬಹುದು.

ಒಂದು ಕಾದಂಬರಿಯನ್ನು ರಚಿಸುವಾಗ ಲೇಖಕನ ಮೇಲೆ ಯಾವ ಘಟನೆಗಳು, ಯಾವ ಸನ್ನಿವೇಶಗಳು ಹೇಗೆಲ್ಲಾ ಆತನ ಮೇಲೆ ಪ್ರಭಾವ ಬೀರುತ್ತವೆ ಎಂಬುದನ್ನು ನಿರ್ಧರಿಸುತ್ತದೆ. ಒಂದು ಕಥಾವಸ್ತು ಘಟಿಸುವಾಗ ಅದಕ್ಕೆ ಒಂದು ನಿರ್ದಿಷ್ಟವಾದ ಸ್ಥಳದ ಅವಶ್ಯಕತೆ ಇರುತ್ತದೆ. ಹಾಗೆಯೇ ಪರಿಸರದ ವೈವಿಧ್ಯತೆ, ಪ್ರಾದೇಶಿಕ ಹಿನ್ನೆಲೆ, ಭೌಗೋಳಿಕ ಹಿನ್ನಲೆ ಮುಖ್ಯವಾಗಿರುತ್ತದೆ. ಘಟನೆ ನಡೆಯುವಾಗ ಅಲ್ಲಿ ಘಟಿಸುವ ಘಟನೆಗೂ ಅಲ್ಲಿನ ಪರಿಸರಕ್ಕೂ ನೇರವಾದ ಸಂಬಂಧವಿರುತ್ತದೆ.

ಕಾದಂಬರಿಯಲ್ಲಿ 'ಕಥಾವಸ್ತು' ವೇ ಕೇಂದ್ರ ಬಿಂಧುವಾಗಿರುತ್ತದೆ. ಮನುಷ್ಯನ ಜೀವನದ ಯಾವುದೇ ಘಟನೆಯಿರಬಹುದು, ಹುಟ್ಟು ಸಾವು, ಪ್ರೇಮ, ಕಾಮ, ವಿವಾಹ ಇತ್ಯಾದಿಗಳು ಹಾಗೂ ಜೀವನದ ಸೋಲು ಗೆಲುವು, ಸಂಘರ್ಷ ಎಲ್ಲಾ ಸಂಗತಿಗಳು ಕಥಾವಸ್ತುವಾಗುತ್ತವೆ. ಇಲ್ಲಿ ಘಟನೆಗಳೆಲ್ಲವೂ ಕಥೆಗೆ ಪೂರಕವಾಗಿರಬೇಕು. ಬಿಡಿಬಿಡಿಯಾದ ಘಟನೆಗಳು ಕೂಡ ಕೆಲವೊಮ್ಮೆ ಕಥೆಯ ಪೂರಕ ಸಂಬಂಧವನ್ನು ಒಳಗೊಂಡಿರುತ್ತವೆ. ಕಥೆಗಾರ ಜೀವನವನ್ನು ತಾನು ನೋಡುವ ಬಗೆ, ತನ್ನ ಸಂಸ್ಕಾರ ಇವುಗಳನ್ನು ಹಿನ್ನಲೆಯಾಗಿಟ್ಟುಕೊಂಡು ಕಥಾವಸ್ತುವನ್ನು ಆಯ್ದುಕೊಳ್ಳುತ್ತಾನೆ. ಕಥೆಗೆ ತಕ್ಕಂತೆ ಕಾದಂಬರಿಕಾರನ ಉದ್ದೇಶವು ಸ್ಪಷ್ಟವಾಗಿರಬೇಕು. ವಿವಿಧ ದೃಷ್ಟಿಕೋನಗಳಲ್ಲಿ ಬದುಕನ್ನು ನೋಡುವಾಗ ವಸ್ತುವಿನ ಆಯ್ಕೆಯು ಬಹಳ ಮುಖ್ಯವಾಗಿರುತ್ತದೆ. ಕಥೆಗೆ ಅನುಗುಣವಾಗಿ ಸೂಕ್ತ ಘಟನಾವಳಿಗಳನ್ನು ಸೇರಿಸುತ್ತಾ ಸಂಯೋಜನೆ ನಡೆಸಬೇಕಾಗಿರುತ್ತದೆ. ವಸ್ತುವನ್ನು ಯಾವ ರೀತಿಯಲ್ಲಿ ಅಭಿವ್ಯಕ್ತಿಗೊಳಿಸಿದರೆ ಅದು ತನ್ನ ಓದುಗ ವರ್ಗವನ್ನು ತಲುಪುತ್ತದೆ ಎಂಬ ಅರಿವು ಕಾದಂಬರಿಕಾರನಿಗೆ ಗೊತ್ತಿರಬೇಕು. ಕತೆ ಹೇಳುವಾಗ ಆತ ಎರಡು ರೀತಿಯಲ್ಲಿ ಹೇಳಬಹುದು.

ವುಗಳೆಂದರೆ ಕಾದಂಬರಿಕಾರ ನೇರವಾಗಿ ಕಥೆಯನ್ನು ಹೊರಗಿನಿಂದ ಹೇಳುವುದು, ಮತ್ತೊಂದು ದಂಬರಿಕಾರ ತಾನೇ ಒಂದು ಪಾತ್ರವಾಗಿ ಕಾದಂಬರಿಯಲ್ಲಿ ತನ್ನ ಅಭಿಪ್ರಾಯವನ್ನು ರೂಪಿಸುವುದು. ಈ ಎರಡು ಬಗೆಯನ್ನೂ ನಾ.ಡಿಸೋಜರವರ ಕಾದಂಬರಿಯಲ್ಲಿ ಕಾಣಬಹುದು.

ಕಾದಂಬರಿಯ ಘಟನೆಯು ಕಥಾವಸ್ತುವಿಗೆ ಅನುಗುಣವಾಗಿ ಬರಬೇಕು. ಘಟನೆಯಿಲ್ಲದೆ ದಂಬರಿ ರೂಪಗೊಳ್ಳಲು ಅಸಾಧ್ಯ. ಕೆಲವೊಮ್ಮೆ ಒಂದೇ ಘಟನೆಯ ಕಥಾವಸ್ತು ಇಡೀ ದಂಬರಿಯಾಗಬಹುದು. ಈ ಗುಣ ಡಿಸೋಜರವರ ಬರಹದಲ್ಲಿದೆ.

ಕಾದಂಬರಿಯ ಕಥಾವಸ್ತುವನ್ನು ಕಾದಂಬರಿಕಾರ ನಿರ್ವಹಿಸುವಲ್ಲಿ ಅನುಸರಿಸುವ ನಿರೂಪಣಾ ಧಾನವನ್ನು ಅಥವಾ ಒಂದು ಕಾದಂಬರಿಯ ಕಥೆಯನ್ನು ಹೇಳುವ ಕ್ರಮವನ್ನು 'ತಂತ್ರ' ಎಂದು ಹೇಳಬಹುದು. ಕಾದಂಬರಿಕಾರ ಯಾವುದೇ ಒಂದು ಉದ್ದೇಶವನ್ನು ಇಟ್ಟುಕೊಂಡು ರಿಣಾಮಕಾರಿಯಾಗಿ ಕಥೆ ಹೇಳುತ್ತಾನೆ. ಈ ವಿಧಾನವೇ ತಂತ್ರ ಒಟ್ಟಾರೆಯಾಗಿ ನ್ನಿವೇಶದೊಂದಿಗಿನ ಕಲಾತ್ಮಕ ಜೆಸುಗೆಯನ್ನು ತಂತ್ರ ಎನ್ನುತ್ತೇವೆ.

"ತಂತ್ರ ಎಂದರೆ ಸಾಮಾನ್ಯವಾಗಿ ಕಾದಂಬರಿ ವಸ್ತುವನ್ನು ಸಂಘಟಿಸುವ ವಿಧಾನ, ಕುತೂಹಲ ರಳಿಸುವಂತೆ ಕಥೆ ಹೇಳುವ ರೀತಿ, ಪರಸ್ಪರ ಪಾತ್ರಗಳ ಸಂಬಂಧ-ಬೆಳವಣಿಗೆ ಉದ್ದೇಶಗಳನ್ನು ಚಿತ್ರಿಸುವ ಕೌಶಲ, ಘಟನೆಗಳನ್ನು ಆಕರ್ಷವಾಗಿ ನಿರೂಪಿಸುವ ಬುದ್ಧಿವಂತಿಕೆ"[7] ಎಂದು ಗಿರಡ್ಡಿ ಗೋವಿಂದರಾಜು ಅಭಿಪ್ರಾಯಪಡುತ್ತಾರೆ. ಕಾದಂಬರಿಕಾರನಿಗೆ ತನ್ನ ಅಭಿರುಚಿ, ಕಲ್ಪನೆ ಅನುಭವಕ್ಕೆ ತಕ್ಕಂತೆ ಕಥೆ ನಿರ್ಮಾಣ ಮಾಡುವಂತಹ ಚಾಕಚಕ್ಯತೆ ಇರುತ್ತದೆ. ಅದು ಅವನ ಪ್ರತಿಭಾ ಕೌಶಲದಿಂದ ಹೊರಹೊಮ್ಮುವ ನಿರೂಪಣಾ ಶಕ್ತಿಯಾಗಿರುತ್ತದೆ.

ಕಾದಂಬರಿಕಾರ ಸಾಮಾನ್ಯವಾಗಿ ಒಂದು ಕಥೆಯನ್ನು ಆಯ್ದುಕೊಂಡಾಗ ಅದರಲ್ಲಿ ಹಲವಾರು ಪಾತ್ರಗಳಿರುತ್ತವೆ. ಆಗ ಅಲ್ಲಿನ ಕೇಂದ್ರ ಪಾತ್ರದ ಮೂಲಕ ಉಳಿದ ಪಾತ್ರಗಳು ಪರಿಚಯಗೊಳ್ಳುವಂತೆ ನಿರೂಪಣೆ ಮಾಡುವುದು ಒಂದು ಬಗೆಯ ತಂತ್ರವಾದರೆ, ಇತರ ಪಾತ್ರಗಳು ಕೇಂದ್ರ ಪಾತ್ರವನ್ನು ಪರಿಚಯಿಸುವುದು ಮತ್ತೊಂದು ಬಗೆಯ ನಿರೂಪಣಾ ತಂತ್ರವಾಗಿದೆ. ಕಾದಂಬರಿಕಾರನ ವೈಯಕ್ತಿಕ ಅಭಿರುಚಿಗೆ ಮತ್ತು ಸಾಮರ್ಥ್ಯಕ್ಕೆ ತಂತ್ರವನ್ನು ಬರವಣಿಗೆಯಲ್ಲಿ ರೂಪಿಸುವುದಾಗಿದೆ.

ಭಾಷೆಯೆಂಬುದು ಮಾನವ ತನ್ನ ಅನುಭವ ಅನಿಸಿಕೆ, ಅಭಿಪ್ರಾಯಗಳನ್ನು ತಿಳಿಸುವ ಮಾಧ್ಯಮವಾಗಿದೆ. ಕಾದಂಬರಿಕಾರ ತನ್ನ ಬರವಣಿಗೆಯಲ್ಲಿ ಪಾತ್ರಗಳು ಪರಸ್ಪರ ತಮ್ಮ ಅನುಭವ

ುತ್ತು ಸಂವೇದನೆಯನ್ನು ಹಂಚಿಕೊಳ್ಳಲು ಭಾಷೆಯನ್ನು ಬಳಸುತ್ತಾನೆ. ಬರಹಗಾರ ಕಾದಂಬರಿಯಲ್ಲಿ ುಖ್ಯವಾಗಿ ತನ್ನ ಅನುಭವವನ್ನು ಓದುಗರಿಗೆ ಅರ್ಥವಾಗುವ ಭಾಷೆಯಲ್ಲಿ ತಿಳಿಸಬೇಕಾಗುತ್ತದೆ. ಾತ್ರಕ್ಕೆ ಸರಿಯಾದ ಭಾಷೆ, ಪರಿಸರಕ್ಕೆ ತಕ್ಕನಾದ ಪಾತ್ರಗಳ ನಿರೂಪಣೆ ಇಲ್ಲದಿದ್ದಲ್ಲಿ ಕುಸಿಯುವ ಂಭವ ಬಹಳ ಹೆಚ್ಚು. ಕಾದಂಬರಿಯ ತೂಕ ಕಡಿಮೆಯಾಗುವುದು ಅಥವಾ ಹೆಚ್ಚಾಗುವುದು ೇಖಕ ಬಳಸುವ ಭಾಷೆ ಮೇಲೆ ನಿರ್ಧಾರಿತವಾಗುತ್ತದೆ. ಬರಹಗಾರನಾದವನು ಭಾಷೆಯನ್ನು ್ರಜ್ಞಾಪೂರ್ವಕವಾಗಿ ಬಳಸಬೇಕು. ಆಗ ಅದು ಶಿಷ್ಟ ಭಾಷೆ ಎನಿಸಿಕೊಳ್ಳುತ್ತದೆ. ಸಾಮಾನ್ಯರ ಭಾಷೆ ಳಸಿದರೆ ಅದು ಆಡು ಭಾಷೆಯಾಗುತ್ತದೆ. ಕಾದಂಬರಿಗಳಲ್ಲಿ ಕಾದಂಬರಿಕಾರರು ಅವರವರ ುನೋಧರ್ಮಕ್ಕೆ ಅನುಗುಣವಾಗಿ ಎರಡೂ ಬಗೆಯ ಭಾಷೆಯನ್ನೂ ಬಳಸಿಕೊಳ್ಳುವ ಅವಕಾಶವಿರುತ್ತದೆ.

ಕಾದಂಬರಿಕಾರನಿಗೆ ಹೃದಯ ಸಂಸ್ಕಾರ ಎಷ್ಟಿದೆ ಎಂಬುದರ ಮೇಲೆ ಆತನ ಭಾಷೆಯ ುಹತ್ವ ಅರಿಯುವಂತಹುದು. ಆತ ಯಾವಾಗಲೂ ಎಚ್ಚರದಿಂದಲೇ ಸಂಭಾಷಣೆ ುರೆಯಬೇಕಾಗುತ್ತದೆ. ಮೈಮರೆತು ಬರೆಯತೊಡಗಿದರೆ ಕಾದಂಬರಿಗೆ ಪಾತ್ರಕ್ಕೆ ುಂದುಂಟಾಗಬಹುದು. ಲೇಖಕನಾದವನಿಗೆ ತನ್ನ ಭಾಷೆಯ ಮೇಲೆ ಪರಿಸರದ ಪ್ರಭಾವ ಇರುತ್ತದೆ. ುಲೆನಾಡಿನ ಪರಿಸರ. ಬಯಲು ಸೀಮೆಯ ಪರಿಸರಕ್ಕೆ ತಕ್ಕ ಭಾಷೆಯನ್ನು ಬರವಣಿಗೆಯಲ್ಲಿ ಳಸುತ್ತಾನೆ. ಮಲೆನಾಡಿನ ಕಥೆಗೆ ಬಯಲು ಸೀಮೆಯ ಮಾತು ಬಳಸಿದರೆ ಅದು ಅಭಾಸವಾಗುತ್ತದೆ. ಹಾಗೆಯೇ ಇದು ನಗರ ಜೀವನಕ್ಕೂ ಅನ್ವಯಿಸುತ್ತದೆ. ಅನಕ್ಷರಸ್ಥರಾದವರು ನಗರ ಜೀವನದ ಶಿಷ್ಟ ಭಾಷೆಯನ್ನು ಬಳಸಲು ಅರಿತಿರುವುದಿಲ್ಲ. ಅವರ ಬಾಯಿಯಲ್ಲಿ ಗ್ರಾಮ್ಯ ಭಾಷೆಯನ್ನೇ ನುಡಿಸಬೇಕಾಗುತ್ತದೆ. ಈ ಎಲ್ಲದರ ತಿಳುವಳಿಕೆ ಕಾದಂಬರಿಕಾರನಿಗಿದ್ದಾಗ ಮಾತ್ರ ಕಾದಂಬರಿಯಲ್ಲಿ ಭಾಷೆ ಮಹಂತ್ವದ ಸ್ಥಾನ ಪಡೆಯುತ್ತದೆ. ಡಿಸೋಜರವರ ಕಾದಂಬರಿಯಲ್ಲಿ ುಲೆನಾಡಿನ ಪರಿಸರದ ಭಾಷೆ ಸಮರ್ಥವಾಗಿ ಮೂಡಿ ಬಂದಿರುವುದನ್ನು ಕಾಣಬಹುದಾಗಿದೆ.

ನಾ. ಡಿಸೋಜರವರ ಕೆಲವೊಂದು ಕಾದಂಬರಿಗಳನ್ನು ಕುರಿತು ಅಧ್ಯಯನ ಮಾಡುವಾಗ ಅವರ ಕಾದಂಬರಿಗಳ ವಸ್ತು ತಂತ್ರ, ಭಾಷೆಗಳ ಅಧ್ಯಯನವನ್ನು ಕಾದಂಬರಿಗಳ ಅಧ್ಯಯನದೊಂದಿಗೆ ಮಾಡಲಾಗಿದೆ.

## ಅಧ್ಯಾಯ – ೪

ದ್ವೀಪ

ಮುಳುಗಡೆ

ಒಡ್ಡು

ಕುಂಜಾಲ ಕಣಿವೆಯ ಕೆಂಪು ಹೂವು

ಒಂದು ಜಲಪಾತದ ಸುತ್ತ

ನೀರು

ವಿಷಾನಿಲ

ಚಿನ್ನದ ಮೊಟ್ಟೆ

– ಕಾದಂಬರಿಗಳ ವಿಮರ್ಶಾತ್ಮಕವಾದ ನಿರೂಪಣೆ

## ನಾ. ಡಿಸೋಜರವರ ಕಾದಂಬರಿಗಳ ವಿಮರ್ಶಾತ್ಮಕ ನಿರೂಪಣೆ

### "ದ್ವೀಪ"

"ದ್ವೀಪ" ಕಾದಂಬರಿಯಲ್ಲಿ ಡಿಸೋಜವರವರು ಎರಡು ಭಿನ್ನ ರೀತಿಯಲ್ಲಿ ಕಥೆಗಳನ್ನು ಹೆಣೆದಿದ್ದಾರೆ. ಎರಡು ಭಿನ್ನ ಕಥೆಗಳನ್ನು ಒಟ್ಟೊಟ್ಟಿಗೆ ಬೆಸೆಯುತ್ತಾ ಹೋಗಿದ್ದಾರೆ. ಮೊದಲನೆಯದಾಗಿ ಅಣೆಕಟ್ಟು ನಿರ್ಮಾಣದ ಕೆಲಸ ಪ್ರಾರಂಭವಾಗಿದ್ದರಿಂದ ನಿಧಾನವಾಗಿ ಒಂದೊಂದೇ ಕುಟುಂಬ ಮೂಲ ಗ್ರಾಮಗಳನ್ನು ತ್ಯಜಿಸಿ ಸರ್ಕಾರದಿಂದ ಪರಿಹಾರ ಪಡೆದು ಹೊಸ ಹೊಸ ಸ್ಥಳಗಳನ್ನು ಅರಸಿಕೊಂಡು ಹೊರ ನಡೆಯುವುದು, ಮಳೆ ಪ್ರಭಾವದಿಂದ ಹೇಗೆ ಮಲೆನಾಡು ಉಗ್ರವಾದ ಪರಿಸ್ಥಿತಿಗೆ ಈಡಾಗುತ್ತದೆ. ಎರಡನೆಯದಾಗಿ ಹೊಸಮನೆ ಎಂಬ ಹಳ್ಳಿಯಲ್ಲಿ ಉಳಿದಿರುವ ಕುಟುಂಬದ ಗಣಪಯ್ಯ ಅವನ ಹೆಂಡತಿ ನಾಗವೇಣಿಯವರ ಮಾಮೂಲಿ ಜೀವನದ ಮೇಲೆ ಲಿಂಗನಮಕ್ಕಿ ಅಣೆಕಟ್ಟು ಹೇಗೆ ಪ್ರಭಾವ ಬೀರುತ್ತದೆ ಎಂಬದನ್ನು ತಿಳಿಸಿಕೊಟ್ಟಿದ್ದಾರೆ.

ಇದು ಪೂರ್ಣವಾಗಿ ಪರಸರಕ್ಕೆ ಸಂಬಂಧಪಟ್ಟ ಕಾದಂಬರಿಯಾಗಿದೆ. ಮನುಷ್ಯನೊಳಗಿನ ಪ್ರಾಕೃತಿಕ ಒತ್ತಡಗಳಿಗೆ ಹಾಗೂ ಹೊರಜಗತ್ತಿನ ವ್ಯಾಪಾರಗಳಿಗೆ ಸಂಬಂಧ ಕಲ್ಪಿಸುವ ಮಾದರಿಯನ್ನು ಈ ಕಾದಂಬರಿ ಅನುಸರಿಸಿದೆ. ಶರಾವತಿಗೆ ಕಟ್ಟಿದ ಅಣೆಕಟ್ಟಿನಿಂದ ಮುಳುಗಡೆಯಾಗಲಿದ್ದ ಹಳ್ಳಿ ಹೊಸಮನೆಯ ಸುತ್ತಲೂ ನೀರು ಆವರಿಸುತ್ತದೆ. ಆದರೆ ಒಂದು ಕುಟುಂಬ ಅನಿವಾರ್ಯವಾಗಿ ಹಳ್ಳಿಯಲ್ಲಿಯೇ ಉಳಿದುಕೊಳ್ಳಬೇಕಾಗುತ್ತದೆ, ರೋಗಗ್ರಸ್ತ ತಂದೆ, ಅತನ ಮಗ ಗಣಪಯ್ಯ ಮತ್ತು ಅವನ ಹೆಂಡತಿ ನಾಗವೇಣಿ ಇವರು ಹೊಸಮನೆಯಲ್ಲಿ ಪರಿಹಾರ ದೊರಯದೇ ಉಳಿದವರು. ಕಾದಂಬರಿಯ ಕೆಲವು ಸನ್ನಿವೇಶಗಳೆಂದರೇ– ಪರಿಹಾರ ದೊರಕಿಸಿಕೊಳ್ಳಲು ಗಣಪಯ್ಯ ಮುಳುಗಡೆ ಕಾರ್ಯಾಲಯಕ್ಕೆ ಅಲೆದಾಡುವುದು, ಹೆಂಡತಿ ನಾಗವೇಣಿಯ ಬಾಲ್ಯದ ಗೆಳೆಯ ಕೃಷ್ಣಯ್ಯ ಜಡಿ ಮಳೆ ಹಿಡಿದು ಆಗ ಕಟ್ಟಿನಲ್ಲಿ ನೀರು ಸಂಗ್ರಹವಾಗುವ ವೇಳೆಗೆ ಮನೆಗೆಲಸಕ್ಕೆ ಬಂದು ಸೇರುವುದು. ಇಲ್ಲಿನ ಪ್ರಮುಖ ಅಂಶ.

ಕಥಾನಾಯಕಿ ನಾಗವೇಣಿ ಒಬ್ಬಂಟಿಯಾಗಿದ್ದಾಳೆ "ಈಗೀಗ ಹೊಸಮನೆ ಎಂದರೆ ಬೇಸರ. ಮನೆಯಲ್ಲಿ ಮಾವ ಇರುವುದರಿಂದ ಕಾಲ ಕಳೆದು ಹೋಗುತ್ತದೆ. ಇಲ್ಲದಿದ್ದರೆ ಮನೆಯೂ ಬೇಸರವಾಗುತ್ತದೆ. ತೋಟ ಹೊಲದಲ್ಲಿ ಕೆಲಸ ಮಾಡುವುದೆಂದರೂ ಅಷ್ಟೆ. ಅಲ್ಲಿ ಒಬ್ಬಂಟಿಯಾಗಿ

ಮಡಿಯಬೇಕು, ಸಂಗಡ ಅವರಿರುತ್ತಾರೆ ಆಗೊಂದು ಈಗೊಂದು ಮಾತಾಡಬಹುದು. ಅದರೂ ಏಕಾಂಗಿತನದ ಅನುಭವ. ಅವರದು ಖಯಾಲಿ ಸ್ವಭಾವ ಮನಸ್ಸು ಬಂದರೆ ಮಾತನಾಡಿದರು. ಇಲ್ಲವೆಂದರೆ ಇಲ್ಲ, ಮಾತಿನಲ್ಲೂ ಆತ್ಮೀಯತೆ ಕಡಿಮೆ, ತನ್ನ ಬಗ್ಗೆ ಅದೇನು ಅನಾದಾರವೋ ಇಲ್ಲ ತಿರಸ್ಕಾರವೂ ಅರಿಯದು”[7] ಎಂಬ ಮಾತಿನಲ್ಲಿ ಅವಳ ಏಕಾಂಗಿತನ ಧ್ವನಿಸುತ್ತದೆ.

ಗಣಪಯ್ಯನ ತಂದೆಯು ತೀರಿಕೊಳ್ಳುತ್ತಾನೆ. ಗಣಪಯ್ಯ ಮುಳುಗದೆ ಉಳಿದಿದ್ದ ಜಮೀನಿನಲ್ಲಿ ಬೆಳೆಯನ್ನು ತೆಗೆಯಲು ಪ್ರಯತ್ನಿಸುತ್ತಾನೆ. ಇಲ್ಲಿ ಒಂದು ಸಂಸಾರ ಬದುಕುವುದಕ್ಕೆ ಹೇಗೆಲ್ಲಾ ಕಷ್ಟ ಪಡುತ್ತದೆ, ಎಂಬುದನ್ನು ಕಾಣಬಹುದು. ದಿನ ಕಳೆದ ಹಾಗೆ ಕೃಷ್ಣಯ್ಯನ ಆಗಮನದಿಂದ ಗಣಪಯ್ಯ ಹಾಗೂ ನಾಗವೇಣಿಯರ ಸಂಬಂಧದಲ್ಲಿ ಬಿರುಕುಂಟಾಗುತ್ತದೆ. ಕಾದಂಬರಿಯು ನಾಗವೇಣಿಯ ಮನಸ್ಥಿತಿಯನ್ನು. ನಿಸರ್ಗದತ್ತವಾದ ನದಿಗೆ ಕೃತಕವಾಗಿ ಕಟ್ಟಿದ ಅಣೆಕಟ್ಟಿನಿಂದ ತನ್ನ ನೈಜ ಸ್ಥಿತಿಯನ್ನು ಕಳೆದುಕೊಳ್ಳುವ ಬಗೆಯನ್ನು ಪರೋಕ್ಷವಾಗಿ ಧ್ವನಿಸುತ್ತದೆ. ಕ್ರಮೇಣ ಮಳೆ ಜಿರುಸಾಗಿ ನೀರು ಏರುತ್ತಿದ್ದಂತೆ ನಾಗವೇಣಿ, ಕೃಷ್ಣಯ್ಯನ ನಡುವೆ ಸೆಳೆತವು ತೀವ್ರವಾಗುತ್ತಾ ಹೋಗುತ್ತದೆ. ದೈಹಿಕ ಸಂಬಂಧವೂ ಏರ್ಪಡುತ್ತದೆ. ಈ ಮಧ್ಯೆ ಗಣಪಯ್ಯ, ಕೃಷ್ಣಯ್ಯ, ನಾಗವೇಣಿಯರ ಮನಸ್ಥಿತಿಯನ್ನು ಕಾದಂಬರಿಕಾರರು ಮನೋಜ್ಞವಾಗಿ ಚಿತ್ರಿಸುತ್ತಾರೆ.

ಮಾನವನಿರ್ಮಿತ ನೀತಿಯ ಚೌಕಟ್ಟು ದಾಟಿ ತಮ್ಮ ಮನದಾಳದಲ್ಲಿದ್ದ ಸುಪ್ತ ಭಾವನೆಗಳನ್ನು ಕೃಷ್ಣಯ್ಯ ಹಾಗೂ ನಾಗವೇಣಿ ಈಡೇರಿಸಿಕೊಳ್ಳುತ್ತಾರೆ. ಮಳೆ ಹೆಚ್ಚಿದಂತೆ ಹೊಸಮನೆ ಮುಳುಗುತ್ತಾ ಬರುತ್ತದೆ. ಸಾಮಾಜಿಕ ನೀತಿಯ ಗಡಿಯ ಹೊರಗೆ ಹೆಜ್ಜೆ ಇಟ್ಟ ಕೃಷ್ಣಯ್ಯ, ನಾಗವೇಣಿ ಜೀವ ತೆಗೆದುಕೊಳ್ಳುತ್ತಾರೆ. ಕೊನೆಯಲ್ಲಿ ಗಣಪಯ್ಯ ಅಸಹಾಯಕನಾಗಿ ದಿಗ್ಭ್ರಾಂತನಾಗಿ ನೋಡುತ್ತಾ ನಿಂತು ಹುಲಿಗೆ ಬಲಿಯಾಗುತ್ತಾನೆ ಹೀಗೆ ಕಥೆ ಮುಕ್ತಾಯವಾಗುತ್ತದೆ.

ಕಾದಂಬರಿಯ ಭಾಷೆಯು ಅತ್ಯಂತ ಸರಳವಾಗಿದ್ದು ಮಲೆನಾಡಿನ ಪರಿಸರದ ಭಾಷೆಯನ್ನು ಒಳಗೊಂಡಿದೆ. ಮಳೆ ಪ್ರವಾಹ ವನ್ಯಜೀವಿಗಳು, ಸೀತಾ/ರಾಮರು ಮಲಗಿದ್ದ ಮಂಚ, ಬೆಟ್ಟ, ಗುಹೆ. ಹುಲಿ ಹೀಗೆ ಕಾದಂಬರಿಯಲ್ಲಿ ಹರಡಿರುವ ವಿವರಗಳು ಕೇವಲ ಸಂಕೇತಗಳೆಂದು ವಿಶ್ಲೇಷಿಸುವಂತಿಲ್ಲ. ಅಷ್ಟರಮಟ್ಟಿಗೆ, ಬರವಣಿಗೆ ಹಾಗೂ ಭಾಷೆ ಸರಳವಾಗಿದ್ದು ಸಹಜವಾಗಿ ಮೂಡಿ ಬಂದಿದೆ.

**"ಮುಳುಗಡೆ"**

"ಮುಳುಗಡೆ" ಕಾದಂಬರಿಯ ಕಥಾನಾಯಕ ಒಬ್ಬ ಅನುಭವಿ ಸಂಶೋಧಕ. ಈ ಕಾದಂಬರಿಯಲ್ಲಿ ಹಳ್ಳಿಯ ಜನರು, ಮುಳುಗಡೆಯ ಕಾರಣಕ್ಕಾಗಿ ಉಂಟಾದ ಏರುಪೇರುಗಳಿಂದ ಕಷ್ಟ ಅನುಭವಿಸಿದ ಬಗ್ಗೆ ಲೇಖಕರು ಅರ್ಥ ಪೂರ್ಣವಾಗಿ ವಿವರಿಸಿದ್ದಾರೆ.

ಈ ಕಾದಂಬರಿಯಲ್ಲಿ ಒಬ್ಬ ಸಂಶೋಧಕನನ್ನು ಕಥೆಯ ನಾಯಕನನ್ನಾಗಿ ರೂಪಿಸಲಾಗಿದೆ. ಕಥಾನಾಯಕನ ಕೆಲಸ ಮುಳುಗಡೆಯಾದ ಪ್ರದೇಶಕ್ಕೆ ಭೇಟಿ ನೀಡುವುದು, ಮುಳುಗಿ ಹೋಗುವ ಪುರಾತನ ವಸ್ತುಗಳನ್ನು ಪಟ್ಟಿಮಾಡಿ, ಆ ವಸ್ತುಗಳನ್ನು ಸಂಗ್ರಹಿಸುವ, ಆ ಬಗ್ಗೆ ಮಾಹಿತಿ ಕ್ರೋಢೀಕರಿಸುವ ಕಾರ್ಯವಾಗಿರುತ್ತದೆ. ಇದರ ಜೊತೆಜೊತೆಗೆ ನಾಯಕನ ಸಾಂಸಾರಿಕ ಬದುಕಿನ ಚಿತ್ರಣವೂ ಇದೆ. ಕಾದಂಬರಿಯಲ್ಲಿ ನಾಯಕ ಸಮರ್ಥವಾಗಿ ಸರ್ಕಾರಿ ಕೆಲಸವನ್ನು ಪೂರೈಸುತ್ತಾನೆ. ಈ ಮೂಲಕ ತಲೆಮಾರುಗಳಿಂದ ಬದುಕಿ ಬಾಳಿದ ಕುಟುಂಬಗಳು, ದೊಡ್ಡ ಮನೆಗಳು ಅವರ ಸಂಬಂಧ, ನಂಬಿಕೆಯ ಬೇರುಗಳು ಕಳೆದು ಹೋಗುತ್ತಿರುವುದು, ಅದ್ಭುತವಾದ ಪುರಾತನ ವಸ್ತುಗಳು ನಾಶವಾಗುವುದನ್ನು ತಿಳಿಸಿಕೊಡುತ್ತಾರೆ.

ಈ ಮುಳುಗಡೆಯ ಘಟನೆಗಳು ಡಿಸೋಜರವರು ತಮ್ಮ ವೃತ್ತಿ ಜೀವನದಲ್ಲಿದ್ದಾಗ ನೇರವಾಗಿ ಕಂಡದ್ದಾಗಿದೆ. ಸರ್ಕಾರಿ ಉದ್ಯೋಗದಲ್ಲಿದ್ದಾಗ ಕಾದಂಬರಿಯಲ್ಲಿ ಬರುವ ಪಾತ್ರಗಳಾದ ರೆವಿನ್ಯೂ ಇನ್‌ಸ್ಪೆಕ್ಟರ್ ಡಯಾಸ, ಇಂಜಿನಿಯರುಗಳು, ಇಮಾಮು, ಮುಳುಗಡೆ ಅಧಿಕಾರಿಗಳು, ಆಡಿಟ್ ಆಫೀಸ್ ಗುಮಾಸ್ತ ಪಾಪಯ್ಯ ಇವರುಗಳ ವ್ಯಕ್ತಿತ್ವವನ್ನು ನೈಜವಾಗಿಯೇ ಚಿತ್ರಿಸಿದ್ದಾರೆ.

ಲೇಖಕನಾದವನು ಜನರ ನೋವು ನಲಿವಿಗೆ ಸ್ಪಂದಿಸಬೇಕು. ಆ ಕೆಲಸವನ್ನು ಡಿಸೋಜರವರು ಮಾಡಿದ್ದಾರೆ. ಸರ್ಕಾರಿ ಸೇವೆ ಹಾಗೆಯೇ ಬದುಕಿನಲ್ಲಿ ಕಂಡ ಅನುಭವವು ಲೇಖಕರಿಗೆ 'ಮುಳುಗಡೆ' ಕಾದಂಬರಿ ರಚಿಸಲು ಅನುವಾಯಿತು. ಇಲ್ಲಿ ಕಥಾನಾಯಕ ಸಂಶೋಧಕನಾಗಿ ಮುಳುಗಡೆಯಾದ ಜಾಗಕ್ಕೆ ಭೇಟಿ ನೀಡಿದಾಗ ಅಲ್ಲಿನ ಸಮಸ್ಯೆ ಅವನನ್ನು ಕಾಡುತ್ತದೆ. ತಲತಲಾಂತರದಿಂದ ಬದುಕಿ ಬಾಳಿದ ಕುಟುಂಬ ಅವರ ಸಂಬಂಧ, ನಂಬಿಕೆಗಳ ಕೊಂಡಿ ಕಳಚಿ ಹೋಗುತ್ತಿದ್ದುದರ ಬಗ್ಗೆ ಆತ ಅಸಮಾಧಾನಗೊಳ್ಳುತ್ತಾನೆ, ಉದಾಹರಣೆಗೆ ಹಿಡಿತೆರಿ ಪಟೇಲ ಧನಪಾಲಯ್ಯನ ಕುಟುಂಬ ಇದಕ್ಕೆ ಸಾಕ್ಷಿಯಾಗಿದೆ. ಅವರ ಕುಟುಂಬದ ಬಾಂಧವ್ಯ, ಒಗ್ಗಟ್ಟು ಎಲ್ಲವೂ ಮುಳುಗಡೆಯೊಂದಿಗೆ ಮುಳುಗಿ

ಹೋಗುವುದು ಸಮಸ್ಯೆಯಾಗಿ ಕಾಡುತ್ತದೆ. ಆ ಮೂಲಕ ಮುಳುಗಡೆಯ ಹಿಂದಿನ ನಿಟ್ಟುಸಿರು ಮನಸವರಿಕೆಯಾಗುತ್ತದೆ.

ಮುಳುಗಡೆ ಆಗುವುದರಿಂದ ಅಮೂಲ್ಯ ವಸ್ತುಗಳು ಇಲ್ಲವಾಗುತ್ತದೆ ಎಂದು ತಿಳಿದ ನಾಯಕ ಅವುಗಳ ಬಗ್ಗೆ ಮಾಹಿತಿ ಕಲೆ ಹಾಕುತ್ತಾನೆ, ಆ ವಸ್ತುಗಳನ್ನು ಸಂಗ್ರಹಿಸುತ್ತಾನೆ. ಇದರ ಜೊತೆಜೊತೆಗೆ ಸಂಶೋಧಕನ ವೈಯಕ್ತಿಕ ಜೀವನದ ಚಿತ್ರಣವೂ ಇದೆ. ಅದೆಂದರೆ ಸಂಶೋಧಕನ ಕುಟುಂಬದಲ್ಲಿ ಉಂಟಾದ ಅವಮಾನ ಕಾದಂಬರಿ ಕೊನೆಯಲ್ಲಿ ಪರಿಹಾರವಾಗಿ ಸುಖಾಂತ್ಯವಾಗುವುದನ್ನು ಕಾಣಬಹುದು.

ಈ ಕಾದಂಬರಿ ಸೊಗಸಾದ ಯೋಜಿತ ಬರವಣಿಗೆಯಿಂದ ಕೂಡಿದ್ದು, ಕಾದಂಬರಿಯ ಚೌಕಟ್ಟು ಲೇಖಕರ ಮನೋಭಾವಕ್ಕೆ ಸರಿಯಾಗಿ ಹೊಂದಿಕೊಂಡಿರುವಂಥದ್ದು. ಇದೊಂದು ಪರಿಣಿತ ಚೌಕಟ್ಟಿನ ಕೃತಿಯಾಗಿದ್ದು, ಕಾದಂಬರಿಯನ್ನು ಎರಡು ಭಾಗವಾಗಿ ವಿಭಜಿಸಿದ್ದಾರೆ. ಮೊದಲನೆಯದು ಕಥೆಯ ಹಿಂದಿನ ನಿಟ್ಟುಸಿರು' ಎರಡನೆಯದು 'ಹೊಸ ಬದುಕು' ಮೊದಲನೆಯ ಭಾಗದಲ್ಲಿ ಸಂಶೋಧಕನ ವೃತ್ತಿಗೆ ಸಂಬಂಧಿಸಿದ ಕೆಲಸಗಳು ನಡೆಯುವುದರ ಜೊತೆಗೆ ನಾಯಕನ ಹೃದಯದಲ್ಲಿನ ನೋವು ಗೋಚರವಾಗುತ್ತದೆ. ಎರಡನೆಯ ಭಾಗದಲ್ಲಿ ಆ ನೋವು, ಸಮಸ್ಯೆಗಳ ಮೂಲವನ್ನು ಎಲ್ಲಿ ಏನು ತಪ್ಪಾಗಿದೆ ಎಂದು ಗುರುತಿಸಿ ಸರಿಮಾಡಿಕೊಳ್ಳುತ್ತಾನೆ.

"ಮುಳುಗಡೆ ಪುರಾತನ ವಸ್ತುಗಳ ದಾಖಲೆ. ಹೀಗೆ ನೆಪ ಮಾಡಿಕೊಂಡು ಸಂಶೋಧಕನಾಗಿ ಓಡಾಡುವ ನಾಯಕ, ಅವನು ಓಡಾಡುವ ಮಲೆನಾಡಿನ ಊರುಗಳು, ಅಲ್ಲಿ ಜನಗಳ ಬದುಕು ಮುಳುಗಡೆಯ ನಿಮಿತ್ಯ ಬದುಕು ಅಲ್ಲೋಲ ಕಲ್ಲೋಲವಾಗುವುದು, ಇವನ್ನೆಲ್ಲಾ ಸೇರಿಸಿ ನಾ. ಡಿಸೋಜರವರು ಉತ್ತಮ ಎನ್ನಬಲ್ಲ ಈ ಕಾದಂಬರಿ ರಚಿಸಿದ್ದಾರೆ. ಮುಳುಗಡೆ ಎನ್ನುವ ಸರ್ಕಾರದ ಯೋಜನೆಯನ್ನು ಜಾರಿಗೆ ತರುವುದರ ನಡುವೆ ಮಾನವಮಿಡಿತಗಳ ಅತಿಸೂಕ್ಷ್ಮ ಭಾವನೆಗಳ ಅನೇಕ ಚಿತ್ರಗಳನ್ನು ನೇಯ್ದಿದ್ದಾರೆ"[3]

ಡಿಸೋಜರ ಇತರ ಕೃತಿಗೆ ಹೋಲಿಸಿದರೆ ನಾಯಕ-ನಾಯಕಿಯರ ಸರಸ-ಸಲ್ಲಾಪ, ಆಸೆ-ಬಯಕೆಗಳು ಮುಂತಾದ ಸನ್ನಿವೇಶಗಳಲ್ಲಿ ಭಾಷೆಯು ಹೆಚ್ಚು ಮುಕ್ತವಾಗಿಯೇ ಬಳಸಲ್ಪಟ್ಟಿದೆ. ಅನೇಕ ಸ್ಥಳನಾಮಗಳು, ಅಲ್ಲಿ ನಡೆಯುವ ಘಟನೆಗಳ ಅತಿಸೂಕ್ಷ್ಮ ಭಾವನೆಗಳನ್ನು ಸರಳ ಶೈಲಿಯಲ್ಲಿ ನಿರೂಪಿಸಿ ಕಾದಂಬರಿಯನ್ನು ಮನಮುಟ್ಟುವಂತೆ ನಾ. ಡಿಸೋಜರವರು ರಚಿಸಿದ್ದಾರೆ.

## 'ಒಡ್ಡು'

'ಒಡ್ಡು' ಕಾದಂಬರಿಯು ಮುಳುಗಡೆಯಾಗದ, ಆದರೆ ಅದರ ಬಿಸಿಗೆ ತನ್ನನ್ನು ಒಡ್ಡಿಕೊಂಡ ರೈತ ಹನುಮಂತಪ್ಪನ ಕಥೆ. ಮನುಷ್ಯನ ಅಭಿವೃದ್ಧಿಗಾಗಿ ನಿರ್ಮಾಣವಾದ ಒಡ್ಡು ಎಂತಹ ಸಮಸ್ಯೆಗಳನ್ನೆಲ್ಲಾ ತಂದು ಒಡ್ಡುತ್ತದೆ ಮತ್ತು ವ್ಯಕ್ತಿಯೊಬ್ಬ ತನ್ನನ್ನು ತಾನು ಹೇಗೆ ಅನೇಕ ಸಮಸ್ಯೆಗಳಿಗೆ ಒಡ್ಡಿಕೊಳ್ಳುತ್ತಾನೆಂಬುದನ್ನು ಅನನ್ಯವಾಗಿ ತಿಳಿಸುತ್ತದೆ. ತಲಕಳಲೆ ಒಡ್ಡು ನಿರ್ಮಾಣದಿಂದಾಗಿ ಅನೇಕ ಪ್ರದೇಶಗಳು ಮುಳುಗಡೆಯಾಗುತ್ತಿವೆ. ಆ ಪ್ರದೇಶದಲ್ಲಿ ತಲತಲಾಂತರದಿಂದ ವಾಸಿಸುತ್ತಿದ್ದ ರೈತರು ತಾವು ಹುಟ್ಟಿ ಬೆಳೆದ, ಪ್ರೀತಿಸಿದ ಭೂಮಿಯಿಂದ ದೂರವಾಗಬೇಕಾದ ನೋವು ಅವರನ್ನು ತಟ್ಟಿ ಕಂಗಾಲಾಗುತ್ತಾರೆ. ಅವರೆಲ್ಲಾ ಬದಲಾದ ಪರಿಸ್ಥಿತಿಗೆ ಹೊಂದಾಣಿಕೆ ಮಾಡಿಕೊಂಡು ಸರ್ಕಾರ ನೀಡಿದ ಹೊಸ ಸ್ಥಳದಲ್ಲಿ ಬದುಕನ್ನು ಪ್ರಾರಂಭಿಸುತ್ತಾರೆ. ಆದರೆ ಹನುಮಂತಪ್ಪನ ಕುಟುಂಬವು ಅಲ್ಲೇ ಉಳಿಯುತ್ತದೆ, ಅವನಿದ್ದ  ಊರಾದ ಚಿತ್ರೋಡಿ ಮುಳುಗಡೆಯಾಗುತ್ತದೋ ಇಲ್ಲವೋ ಎನ್ನುವುದು ನಿರ್ಧಾರವಾಗುವುದಕ್ಕೆ ತುಂಬಾ ಸಮಯ ಹಿಡಿದು, ಕೊನೆಗೆ ಆ ಪ್ರದೇಶ ಮುಳುಗಡೆ ಆಗದಿದ್ದರೂ ಸುತ್ತಲೂ ನೀರು ಆವರಿಸಿ ದ್ವೀಪವಾಗಿ ಹೊರ ಜಗತ್ತಿನೊಡನೆ ಸಂಪರ್ಕವಿಲ್ಲದಂತಾಗುತ್ತದೆ. ಹನುಮಂತಪ್ಪ ಸರ್ಕಾರ ಹಾಗೂ ಅದರ ಕಾರ್ಯ ನಿರ್ವಹಣಾ ರೀತಿಯ ಜೊತೆ ಸುದೀರ್ಘ - ಗುದ್ದಾಟ ನಡೆಸುತ್ತಾನೆ. ಸರ್ಕಾರಕ್ಕೆ ಮಾತ್ರ ಹನುಮಂತಪ್ಪನ, ತೊಳಲಾಟ ಅರ್ಥವಾಗುವುದೇ ಇಲ್ಲ, ಸರ್ಕಾರಿ ಅಧಿಕಾರಿಗಳು ಯಾಂತ್ರಿಕವಾಗಿ ನಿರ್ದಯವಾಗಿ ವರ್ತಿಸುತ್ತಾರೆ. ಅನೇಕ ವರ್ಷಗಳ ಹೋರಾಟದ ಅಂತ್ಯದಲ್ಲಿ ಕೊನೆಗೂ ಸರ್ಕಾರದ ಪರಿಹಾರ ನೀಡಿಕೆಯ ಆಜ್ಞೆ ಹನುಮಂತಪ್ಪನ ಮನೆಗೆ ಬರುತ್ತದೆ. ಸರ್ಕಾರದ ಬೇಜವಾಬ್ದಾರಿ ವರ್ತನೆ ಅವನ ಕುಟುಂಬದ ಸದಸ್ಯರನ್ನು ಬಲಿ ತೆಗೆದುಕೊಳ್ಳುವುದಲ್ಲದೆ, ಅವನೂ ಹೆಣವಾಗುತ್ತಾನೆ ಎಂಬ ಸೂಕ್ಷ್ಮ ವಿವರ ಕಾದಂಬರಿಯಲ್ಲಿದೆ.

ತಲಕಳಲೆ ಹತ್ತಿರದ ಚಿತ್ರೋಡಿಯ ಐದು ಎಕರೆ ಜಮೀನು ಹನುಮಂತಪ್ಪನ ಹಿರಿಯರು ಕಷ್ಟಪಟ್ಟು ಮಾಡಿದ್ದು, ಈ ಜಮೀನು ತಲತಕಲೆ ಒಡ್ಡಿನಲ್ಲಿ ಮುಳುಗದೆ ಉಳಿಯಿತು. ಇದು ಹನುಂತಪ್ಪನಿಗೆ ಸಂತೋಷದ ವಿಷಯವಾದರೂ ಜಮೀನು ಕ್ರಮೇಣ ಅವನನ್ನು ಕಾಡತೊಡಗುತ್ತದೆ. ನೀರಿಗೆ ಇಳಿದ ಮೇಲೆ ಚಳಿಯೇನು ಮಳೆಯೇನು? ಎಂಬ ಮಾತಿನಂತೆ ಅದೇನಾಗುತ್ತೆ, ನೋಡುತ್ತೇನೆಂದು ಎದುರಿಸುವ ಛಲದಿಂದ ಹನುಮಂತಪ್ಪ ನಿಲ್ಲುತ್ತಾನೆ.

ಅಣೆಕಟ್ಟು ನಿರ್ಮಾಣದ ಜೊತೆಗೇನೇ ಏನೆಲ್ಲಾ ಸಮಸ್ಯೆಗಳು ಉದ್ಭವಾಗುತ್ತವೆ. ಒಂದು ಟುಂಬದ ಮೇಲೆ ಏನು ಪರಿಣಾಮವನ್ನು ಉಂಟುಮಾಡುತ್ತದೆ ಎಂಬುದು ಇಲ್ಲಿಯ ಕಥೆ.

"ಈ ಕಾದಂಬರಿಯ ನಾಯಕ ಹನುಮಂತಪ್ಪ ಮುಳುಗಡೆಯಾಗುವ ಪ್ರದೇಶದಲ್ಲಿನ ರೈತ ಲ್ಲ. ಅವನು ಮುಳುಗಡೆ ಆಗದ ಪ್ರದೇಶದಲ್ಲಿದ್ದು ಸೃಷ್ಟಿಗೊಂಡ ಹೊಸ ಸಮಸ್ಯೆಯ ಜಿಗೆ ತನ್ನನ್ನು ಡ್ಡಿಕೊಂಡವನು, ಈ ಒಡ್ಡಿಕೊಳ್ಳುವುದರ ಘೋರ ಪರಿಣಾಮಗಳ ನಿರೂಪಣೆಯೇ ಈ ದಂಬರಿಯ ಮುಖ್ಯ ವಸ್ತುವಾಗಿದೆ."[३]

ಒಡ್ಡು ಕಾದಂಬರಿಯನ್ನು ಡಿಸೋಜರವರು ವಿವಿಧ ಆಯಾಮಗಳಲ್ಲಿ ಬರೆದಿರುವುದರಿಂದ ದು ಹನುಮಂತಪ್ಪನ ಕುಟುಂಬದ ವೈಯಕ್ತಿಕ ಸಮಸ್ಯೆಯಾಗುವುದಿಲ್ಲ. ಒಂದು ಪರಿಸರವು ಧುನಿಕತೆಯನ್ನು ಬರಮಾಡಿಕೊಂಡಾಗ ಹಲವು ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ, ಈ ಮಸ್ಯೆ ಮನುಷ್ಯನ ಜೀವನದ ಮೇಲೆ ನೇರ ಹಾಗೂ ಪರೋಕ್ಷವಾಗಿ ಪ್ರಭಾವ ಬೀರುತ್ತದೆ. ಂಬುದನ್ನು ಒಟ್ಟೊಟ್ಟಿಗೆ ಹೆಣೆದಿರುವುದರಿಂದ ಇದು ಆಧುನಿಕ ವ್ಯವಸ್ಥೆಯ ಮಾನವ ಕುಲದ ರಂತ ಕಥೆಯೂ ಆಗುತ್ತದೆ.

**ಕುಂಜಾಲು ಕಣಿವೆಯ ಕೆಂಪು ಹೂವು"**

'ಕುಂಜಾಲು ಕಣಿವೆಯ ಕೆಂಪು ಹೂವು' ಸಂಪೂರ್ಣ ಪರಿಸರಕ್ಕೆ ಸಂಬಂಧಪಟ್ಟ ವಸ್ತುಗಳನ್ನು ಳಗೊಂಡ ಕಾದಂಬರಿ. ಮನುಷ್ಯನ ಸಾಹಸಮಯ ಜೀವನ, ಅವನು ಆಧುನಿಕತೆಯೆಡೆಗೆ ಸಾಗಿ ಂದಂತೆ ಅವನ ವರ್ತನೆಗಳ ಮಾರ್ಪಾಡು, ಅವನು ಆವಾಹಿಸಿಕೊಂಡ ವಿಲಕ್ಷಣ ಗುಣಗಳು, ಮಯಾನುಕೂಲಸಿಂಧು, ಅತಿಕ್ರಮಣ ಪ್ರವೃತ್ತಿ, ಅವನ ಸ್ವಾರ್ಥ, ದುರಾಸೆ, ಅವನು ಪ್ರಕೃತಿಯ ಮೇಲೆ ಎಸಗುವ ಅತ್ಯಾಚಾರ, ಅನಾಚಾರ, ಆಧುನಿಕತೆಯ ಹೆಸರಿನಲ್ಲಿ ಕಳೆದುಕೊಳ್ಳುತ್ತಿರುವ ಾವನಾತ್ಮಕ ಸಂಬಂಧಗಳು, ಅಮಾನವೀಯ ಮೌಲ್ಯಗಳು, ಪ್ರಗತಿಯ ಹೆಸರಿನಲ್ಲಿ ಆಗುತ್ತಿರುವ ಗತಿಗಳು ಇವೆಲ್ಲದರ ವಸ್ತುಗಳನ್ನೊಳಗೊಂಡ ಸೂಕ್ಷ್ಮ ಸಂವೇದನೆಯ ಕಾದಂಬರಿ 'ಕುಂಜಾಲು ಣಿವೆಯ ಕೆಂಪು ಹೂವು.'

ಹತ್ತು ವರ್ಷಗಳಿಗೊಮ್ಮೆ ಅರಳುವ ಅಪರೂಪದ ಕೆಂಪು ಹೂವನ್ನು ನೋಡಲು ತಂದೆ ಮತ್ತು ಮಗ ಇಬ್ಬರೂ ಹೋದಾಗ ಅವರಿಗುಂಟಾದ ಅನುಭವವನ್ನು ವಿಶ್ಲೇಷಿಸುವ ವಸ್ತುವನ್ನು ಈ ಕಾದಂಬರಿ ಒಳಗೊಂಡಿದೆ.

ಇಲ್ಲಿ ತಂದೆ ಮಗ ಇಬ್ಬರೂ ನಿಸರ್ಗದ ಆಕರ್ಷಣೆಗೆ ಒಳಗಾಗಿದ್ದರೂ, ಅವರಿಬ್ಬರ ಮನೋಭಾವಗಳು ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ತಂದೆ ರಾಮರಾಯರು ಪ್ರಕೃತಿಯ ಸಹಜ ಸೌಂದರ್ಯಕ್ಕೆ ಮರುಳಾಗಿ, ಹತ್ತು ವರ್ಷಗಳಿಗೆ ಒಮ್ಮೆ ಅರಳುವ ಕೆಂಪು ಹೂವನ್ನು ನೋಡಲು ಹೋದರೆ, ಮಗ ದೈನಂದಿನ ನಾಗರಿಕ ಜಗತ್ತಿನ ಜಂಜಾಟಗಳಿಂದ ಬೇಸತ್ತು ಬದಲಾವಣೆಗಾಗಿ, ಹೂವನ್ನು ನೋಡಲು ಹೋಗುತ್ತಾನೆ. ಅನಂತನಂತಹ ಬುದ್ಧಿಜೀವಿಯ ಪಾತ್ರವನ್ನು ಸೃಷ್ಟಿಸಿ ಅವನ ಮೂಲಕ ಕಥೆಯನ್ನು ನಿರೂಪಿಸುತ್ತಾ ಹೋಗಿರುವುದನ್ನು ನಾವಿಲ್ಲಿ ಕಾಣಬಹುದು. ಪ್ರವಾಸಕಥನದ ಅನುಭವವನ್ನು ಮೈಗೂಡಿಸಿಕೊಂಡಿರುವ ಈ ಕಾದಂಬರಿ ಪರಿಸರ ಪ್ರೇಮವನ್ನು ಜಾಗೃತಗೊಳಿಸುವ ಅತ್ಯುತ್ತಮವಾದ ಕಥನವಾಗಿದೆ.

"ಬಾಂಬೇಲಿ ಎಲ್ಲಾ ಇದೆ, ಆದರೆ ಶಾಂತಿ ಇಲ್ಲ", "ಊರಲ್ಲಿ ಏನೂ ಇಲ್ಲ. ಆದರೆ ಶಾಂತಿ ಇದೆ" ಎನ್ನುವ ಗೆಳೆಯ ಸರ್ವೋತ್ತಮನ ಸಲಹೆಯ ಮೇರೆಗೆ ಕಥಾನಾಯಕ ಅನಂತ ಮನಸ್ಸಿಗೆ ತುಷ್ಟಿ ಕೊಡುವಂತಹ ಕ್ರಿಯಾತ್ಮಕ ಕಾರ್ಯವನ್ನು ಕೈಗೊಳ್ಳಬೇಕೆಂದು , ತಂದೆಯ ದಿನಚರಿಯಿಂದ ಪ್ರೇರಿತನಾಗಿ ತಾನೂ ಕುಂಜಾಲು ಕಣಿವೆಯ ಕೆಂಪು ಹೂವನ್ನು ನೋಡಲು ಹೋಗುತ್ತಾನೆ. ಕಥಾನಾಯಕ ಅಟ್ಟದ ಮೇಲೆಯೇ ಕುಳಿತು ಸಂಪೂರ್ಣ ತಂದೆಯ ದಿನಚರಿಯನ್ನು ಓದಿದ್ದರೆ ಕೇವಲ ಅದೊಂದು ಪ್ರವಾಸ ಕಥನವಾಗಿ ಪರಿಣಮಿಸುತ್ತಿತ್ತು. ಆದರೆ ಕಾದಂಬರಿ ಆ ಒಂದು ಅಪಾಯದಿಂದ ಪಾರಾಗಿ, ಆಯಾ ಸ್ಥಳಗಳಿಗೆ ಹೋದಾಗ, ತಂದೆಗೆ ಉಂಟಾದ ಅನುಭವಗಳನ್ನು ಓದುತ್ತಾ, ಜೊತೆಗೆ ತನ್ನ ಅನುಭವಗಳೊಂದಿಗೆ ಸಮೀಕರಿಸಿಕೊಳ್ಳುವ ತಂತ್ರ ಬಹಳ ಸೊಗಸಾಗಿ ಕೃತಿಯಲ್ಲಿ ಮೂಡಿ ಬಂದಿದೆ.

ಇಲ್ಲಿ ಬರುವ ತಂದೆ ರಾಮರಾಯರ ಕತೆ ದಿನಚರಿಯ ಸರಣಿಯಲ್ಲಿ, ಕಥಾನಾಯಕನು ಅದನ್ನು ಓದುತ್ತಿರುವಂತೆಯೇ ವರ್ತಮಾನವು ಕೂಡ ಚಲಿಸುತ್ತಲೇ ಇರುತ್ತದೆ. ಇದು ಕೇವಲ ವರ್ತಮಾನದ ಸ್ಥಿತಿಯಲ್ಲಿ ನೆನಸಿಕೊಂಡ ಅನುಭವವಲ್ಲ. ಬದಲಿಗೆ ಚಲಿಸುವ ವರ್ತಮಾನದೊಂದಿಗೆ, ಹೊಂದಿಸಿಕೊಂಡಿರುವಂತಹದ್ದು. ಹೀಗೆ ಭೂತ ವರ್ತಮಾನಗಳೆರಡೂ ಒಟ್ಟಿಗೆಯೇ ಅನುಭವಕ್ಕೆ ಬರುತ್ತದೆ. ಭೂತಕಾಲದ ಪ್ರಕೃತಿಯ ಸಂಬಂಧವು ವರ್ತಮಾನದ ಪ್ರಗತಿಯ ಹೆಸರಿನಲ್ಲಿ

ಿಸುತ್ತಿರುವ ನಿಸರ್ಗದರಿವನ್ನು ಉಂಟುಮಾಡುತ್ತದೆ. ಹೀಗಾಗಿ ಭೂತ ವರ್ತಮಾನಗಳೆರಡೂ ಂದಕ್ಕೊಂದು ಬೆಲೆಕಟ್ಟುತ್ತಾ ಸಾಗುತ್ತವೆ. ಕಾದಂಬರಿಯ ವಸ್ತುವಿಗೆ ಈ ತಂತ್ರ ಪೂರಕವಾಗಿಯೇ ಂದಿದೆ. ಇಡೀ ಕಥೆಯನ್ನು ಕಾದಂಬರಿಕಾರರು ದಟ್ಟವಾದ ವಿವರಗಳಿಂದ ಶ್ರೀಮಂತಗೊಳಿಸಿದ್ದಾರೆ. ಕೃತಿ ವಿವರಗಳ ನೈಜ ನಿರೂಪಣೆಯಿಂದ ಈ ಕಥೆಗೆ ಸಹಜತೆ ಪ್ರಾಪ್ತವಾಗಿದೆ. ಎಲ್ಲವನ್ನು ನೇರವಾಗಿ ದುಗರ ಮುಂದೆ ತೆರೆದಿಡುವ ಕಾದಂಬರಿಕಾರರು ಯಾವುದೇ ಅಮೂರ್ತ ಸಂಕೇತಗಳನ್ನು ಳಸಿಕೊಂಡಿಲ್ಲ. ವಸ್ತು ಮತ್ತು ನಿರೂಪಣೆ ಎರಡರಲ್ಲೂ ಸರಳತೆ ಇದೆ. ಕಥೆ ತನ್ನ ಸುಂದರ ೋಚಕ ಶೀರ್ಷಿಕೆಯಿಂದಲೇ ಆಕರ್ಷಿಸುತ್ತದೆ.

ಮಾನವ ಹಾಗೂ ಪ್ರಕೃತಿಯ ಮಧ್ಯೆ ಸೌಹಾರ್ದಯುತ ಸಂಬಂಧವಿರಬೇಕು ನಿಜ. ದರೆ, ಮಾನವನ ಅತಿಕ್ರಮಣ ಪ್ರವೃತ್ತಿಯಿಂದ ಪ್ರಕೃತಿ ಹಾಳಾಗುತ್ತಿರುವುದರ ಬಗ್ಗೆ ಾದಂಬರಿಕಾರರಿಗೆ ಇಲ್ಲಿ ವಿಷಾದವಿದೆ. ಆದರೆ ಕಾದಂಬರಿಕಾರರು ಆರೋಪ, ಪ್ರತ್ಯಾರೋಪಗಳನ್ನು ಲ್ಲಿಯೂ ತರುವುದಿಲ್ಲ. ಅವರ ಉದ್ದೇಶ ಸಾಂಸ್ಕೃತಿಕ ಸ್ಥಿತ್ಯಂತರಗಳ ಪ್ರಕ್ರಿಯೆಯ ಸೂಕ್ಷ್ಮತೆಯನ್ನು ತ್ರಿಸುವುದೇ ಆಗಿದೆ. ಹೊಸತನ ಎನ್ನುವುದು ಕೇವಲ ಬಾಹ್ಯ ಆಮಿಷವಾದಾಗ ಅದು ವ್ಯಕ್ತಿಯನ್ನು ುರಂತದ ಕೂಪಕ್ಕೆ ತಳ್ಳುತ್ತದೆ. ಅದೇ ವ್ಯಕ್ತಿಯ ಸಂವೇದನೆಯನ್ನು ಸೂಕ್ಷ್ಮಗೊಳಿಸಿ, ಚುರುಕುಗೊಳಿಸಿ ೇತನ ಜೀವನದ ಅರಳುವಿಕೆಗೆ ಕಾರಣವಾಗುತ್ತದೆ, ಎನ್ನುವುದನ್ನು ಗೋವಿಂದರಾಯರ ಹಾಗೂ ಅವರ ಮಗನ ವಿಷಯದಲ್ಲಿ ನಾವು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಪ್ರಕೃತಿ–ಮನುಷ್ಯನ ಸಂಬಂಧ ಲೆಮಾರಿನಿಂದ ತಲೆಮಾರಿಗೆ ಬರುವಾಗ ಯಾವ ರೀತಿ ಹಂತ ಹಂತವಾದ ಬದಲಾವಣೆಯನ್ನು ಡೆಯುತ್ತದೆ ಎನ್ನುವುದನ್ನು ಗಮನಿಸಿದಾಗ ಕಾದಂಬರಿಕಾರರ ಪ್ರಜ್ಞೆಯ ತೀಕ್ಷ್ಣತೆಯ ಅರಿವಾಗುತ್ತದೆ.

ತಂದೆ ರಾಮರಾಯರು ಕೆಂಪು ಹೂವನ್ನು ಕಂಡಾಗ ಬಹಳಷ್ಟು ಸಂತೋಷಪಟ್ಟಿರುತ್ತಾರೆ. ಆದರೆ ಮಗ ಅನಂತನ ಕಾಲಕ್ಕಾಗಲೇ ಪರಿಸರದಲ್ಲಿ ಸಾಕಷ್ಟು ಬದಲಾವಣೆಗಳಾಗಿರುತ್ತವೆ. ಅವನು ಹ ಶ್ರಮವಹಿಸಿ ಆ ಹೂವನ್ನು ನೋಡಲು ಬಂದಾಗ, ಅದಾಗಲೇ ಮರೆಯಾಗಿದುದ್ದು, ಅವನಿಗೆ ಾಣಿಸದೇ ಇರುವಾಗ ವಿಷಾದ ಉಂಟಾಗುತ್ತದೆ. ಇಲ್ಲಿ ಆ ಹೂವು ಕಾಣದೆ ಇರುವಾಗ ಸಹನೆಯನ್ನಾಗಲೀ, ಇನ್ನಾವುದೇ ಭಾವನೆಯನ್ನು ತೋರದೆ ತೀರ ನಿರಾಶಾಭಾವವನ್ನು ್ಯಕ್ತಪಡಿಸುತ್ತಾನೆ. ಇಲ್ಲಿ ಕಾದಂಬರಿಕಾರರ ನಿರೂಪಣೆ ಉದ್ವೇಗ, ಆವೇಶವಿಲ್ಲದೇ ಬಹಳ ತಣ್ಣನೆಯ

ದಲ್ಲಿರುವುದನ್ನು ಕಾಣಬಹುದು. "ಬಂಡೆ ಹತ್ತಿದೆ....ಬಗ್ಗಿ ನೋಡಿದೆ ಏನಿದೆ ಅಲ್ಲಿ? ಕುರುಚಲು ತ, ದತ್ತೂರಿಗಿಡ, ಡಕ್ಕದಗಿಡ, ನೆಗ್ಗಿಮುಳ್ಳು, ಜಾಲಿಮುಳ್ಳು, ಪಾರ್ಥೇನಿಯಂ, ಯುಪಟೋರಿಯಂ.... ಬಂಡೆ ಮೇಲೆ ಕೂತು ಅತ್ತೆ, ಜೀವನದಲ್ಲಿ ಅತ್ಯಮೂಲ್ಯವಾದುದನ್ನು ಕಳೆದುಕೊಂಡವರು ಅತೀವ ಂಕಟಪಡುವಂತೆ ನಾನು ಸಂಕಟಪಟ್ಟೆ."[೪] ಇದು ಕಥಾನಾಯಕನ ಸಂಕಟ ಮಾತ್ರವಲ್ಲ, ದಂಬರಿಕಾರರ ಸಂಕಟವೂ ಹೌದು. ಎಲ್ಲಾ ಪರಿಸರ ಪ್ರೇಮಿಗಳ ಸಂಕಟವೂ ಹೌದು. ಇದು ರಿಸರದ ಮೇಲೆ ಮನುಷ್ಯ ಮಾಡಿದ ವ್ಯಭಿಚಾರ. ಬದುಕಿನಲ್ಲಿ ನಾವು ಕಳೆದುಕೊಳ್ಳುತ್ತಿರುವ ಮೌಲ್ಯಗಳ ಸತ್ಯ ಇಲ್ಲಿದೆ. ಜೊತೆಗೆ ಪ್ರಕೃತಿ ಪ್ರೇಮ, ಮನುಷ್ಯರಲ್ಲಿರ ಬೇಕಾದ ಗೌರವ ಹಾನುಭೂತಿಗಳ ಹಾಗೂ ಹಣಕ್ಕಿಂತ ಗುಣಕ್ಕೆ ಬೆಲೆಕೊಡುವ ಒಂದು ಅಮೂಲ್ಯ ಜೀವನ ಕ್ರಮವೇ ಶಿವೆಯ ಕೆಂಪು ಹೂವಿನೊಂದಿಗೆ ಮಾಯವಾದಂತೆನಿಸುತ್ತದೆ.

"ಅತ್ಯಾಧುನಿಕ ಆವಿಷ್ಕಾರಗಳು, ಸಂಶೋಧನೆಗಳು ನಮ್ಮ ಜೀವನವನ್ನು ಸರಳವೂ ುಖಮಯವೂ ಆಗಿ ಮಾರ್ಪಡಿಸುತ್ತಿರುವ ಇಂದಿನ ದಿನಗಳಲ್ಲಿ, ಹಿಂದಿನವರು ರೂಢಿಸಿಕೊಂಡ ಕೆಲ ಮೌಲ್ಯಗಳನ್ನು ನಾವು ಮರೆಯುತ್ತಿದ್ದೇವೆ. ಅವುಗಳಿಂದ ವಂಚಿತರಾಗುತ್ತಿದ್ದೇವೆ. ವಿಶೇಷವಾಗಿ ಪ್ರಕೃತಿ ್ರೇಮ, ಜೀವನ ಶ್ರದ್ಧೆ, ಆಸಕ್ತಿ, ಇತ್ಯಾದಿಗಳನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ಏಕೆ ಹೀಗಾಯಿತು ನಾವು ಕಳೆದುಕೊಂಡದ್ದು ಏನು? ಇಂದಿನವರ ತೊಳಲಾಟ ಯಾವ ಬಗೆಯದ್ದು?"[೫] ಎಂಬುದೇ ಆಗ ನಮ್ಮೆಲ್ಲರ ಮುಂದಿರುವ ಪ್ರಶ್ನೆ. ಇಂಥ ಸೂಕ್ಷ್ಮ ಕಥಾವಸ್ತುವಿನ ಮೂಲಕ ಡಿಸೋಜರವರು ನಮ್ಮ ಮನಗೆಲ್ಲುತ್ತಾರೆ.

**ಒಂದು ಜಲಪಾತದ ಸುತ್ತ"**

"ಒಂದು ಜಲಪಾತದ ಸುತ್ತ" ಕಾದಂಬರಿಯನ್ನು ರಚಿಸುವ ಕಾಲಕ್ಕೆ ಜಗತ್ಪ್ರಸಿದ್ಧ ಜೋಗ ಜಲಪಾತವನ್ನು ಸುಮಾರು ನಲವತ್ತೈದು ವರ್ಷಗಳ ಕಾಲ ನೋಡುತ್ತಾ ಬಂದಿದ್ದ ಕಾದಂಬರಿಕಾರರು ಜಲಪಾತದ ಸುತ್ತಲಿನ ಬದುಕನ್ನು ಕಂಡು ಅದರ ಸುತ್ತಲೇ ಒಂದು ಕಾದಂಬರಿಯನ್ನು ಹೆಣೆದಿದ್ದಾರೆ. ಒಂದು ತಲೆಮಾರು, ಜಲಪಾತದಿಂದ ಸ್ಫೂರ್ತಿ ಪಡೆದು, ಜೀವನೋತ್ಸಾಹದ ಪ್ರತೀಕವಾಗಿದೆ. ಆದರೆ ಇನ್ನೊಂದು ತಲೆಮಾರಿನ ಹೊತ್ತಿಗೆ ಈ ಜಲಪಾತವೇ ಸೊರಗಿ ನಾಶವಾಗಿ ಹೋಗಿರುತ್ತದೆ. ಈ ಸ್ಥಿತ್ಯಂತರದ ಬದುಕನ್ನು ಕಂಡ ಕಾದಂಬರಿಕಾರರು, ಸರಳವಾಗಿ ಆ ಪ್ರದೇಶಗಳ, ಆಯಾ ಕಾಲದ

ಸ್ತು ಸ್ಥಿತಿಯನ್ನು ನಿರೂಪಿಸಿದ್ದಾರಲ್ಲದೆ, ಒಂದು ಕ್ರೈಸ್ತ ಕುಟುಂಬದ ರುಜಾರಿಯು ಜೀವನದ ಳಬೀಳುಗಳನ್ನು ಹೆಣೆದುಕೊಂಡು ಹೋಗಿದ್ದಾರೆ.

ಉತ್ಸಾಹಿ ಯುವಕ ರುಜಾರಿ ಜೋಗದಲ್ಲಿ ಇರುವ ಪ್ರವಾಸಿ ಮಂದಿರದ ಡುಗೆಯವನಾಗಿ ನೇಮಕಗೊಳ್ಳುತ್ತಾನೆ. ಅಲ್ಲಿನ ಪ್ರಕೃತಿಯೊಂದಿಗೆ ಜೀವನವನ್ನು ಹೊಂದಿಸಿಕೊಂಡು ನ್ನ ಹೊಸ ಬದುಕನ್ನು ಪ್ರಾರಂಭಿಸುತ್ತಾನೆ. ಅವನಿಗೆ ಜೊತೆಯಾಗಿ ಬಂದ ಮರಿಯಾ ಅವನಿಗೆ ನುರೂಪಳಾದ ಪತ್ನಿಯಾಗಿ, ಅವರ ದಾಂಪತ್ಯ ಜೀವನ ರಸಮಯವಾಗಿ ನಡೆಯುತ್ತಿರುತ್ತದೆ. ವಿಬ್ಬರೂ ಜಲಪಾತದ ನಾಲ್ಕು ಕವಲುಗಳಲ್ಲಿ ರಾಜ ರಾಣಿಯಾದರೆ ತಮ್ಮ ಮಕ್ಕಳು ರೋರರ್ ಕೆಟ್‌ಗಳನ್ನು ಸಂಕೇತಿಸುವಂತೆ ರೋರಿ ರಾಕಿ ಎಂದು ಹೆಸರನ್ನಿರಿಸುತ್ತಾರೆ. ಮೊದಲಿಗೆ ಪ್ರವಾಸಿ ಂದಿರಕ್ಕೆ ಬರುತ್ತಿದ್ದ ಅಧಿಕಾರಿಗಳು ಉನ್ನತ ಧ್ಯೇಯಗಳನ್ನು ಹೊಂದಿದವರಾಗಿದ್ದು, ರುಜಾರಿ ವರೆಲ್ಲರ ಪ್ರೀತಿ, ವಿಶ್ವಾಸಗಳನ್ನು ಗಳಿಸಿಕೊಂಡಿರುತ್ತಾನೆ. ಆದರೆ ಅಲ್ಲಿ ವಿದ್ಯುದಾಗರ ಪ್ರಾರಂಭವಾಗುತ್ತಿದ್ದ, ಹಾಗೆ ಅಲ್ಲಿಗೆ ಬರುತ್ತಿದ್ದ ಅಧಿಕಾರಿಗಳ ವರ್ತನೆಯಿಂದ ಬೇಸತ್ತು, ಕೆಲಸಕ್ಕೆ ಾಜಿನಾಮೆ ನೀಡುತ್ತಾನೆ. ಅಲ್ಲಿಯೇ ಹೊಲ, ತೋಟ, ಮನೆ ಮಾಡಿಕೊಂಡು ಸ್ವತಂತ್ರ ಜೀವನವನ್ನು ಡೆಸುತ್ತಿರುತ್ತಾನೆ. ಕ್ರಿಸ್‌ಮಸ್ ಹಬ್ಬಕ್ಕೆಂದು ದನದ ಗೊದಲಿಯನ್ನು ನಿರ್ಮಿಸಲು ಅವರಿಬ್ಬರು ಮಕ್ಕಳು ಡಬಳ್ಳಿಗಳನ್ನು ಸಂಗ್ರಹಿಸಲು ಹೋದಾಗ ಅಲ್ಲಿ ಬಂಡೆ ಸಿಡಿಸಲು ಇಟ್ಟಿದ್ದ ಡೈನಾಮೈಟ್ ಸಿಡಿದು ುಕ್ಕಳಿಬ್ಬರೂ ಅಪಘಾತಕ್ಕೀಡಾಗಿ ಮೃತ್ಯುವನ್ನಪ್ಪುತ್ತಾರೆ. ಈ ಆಘಾತವನ್ನು ಸಹಿಸಲಾರದೆ ಕೊರಗಿ ುರಿಯಾ ಮಕ್ಕಳನ್ನು ಹಿಂಬಾಲಿಸುತ್ತಾಳೆ. ಕಡೆಗೊಂದು ದಿನ ರುಜಾರಿ ಕಾಡು ಕಡಿಯುವ ಕಳ್ಳರನ್ನು ದುರಿಸಲು ಹೋಗಿ ಅವನ ಮೇಲೆ ಮರ ಬಿದ್ದು ಅಸುನೀಗುತ್ತಾನೆ. ಹೀಗೆ ರುಜಾರಿಯ ಕಥೆ ೊನೆಗೊಂಡಂತೆ ಜಲಪಾತದಲ್ಲಿಯೂ ಹೆಬ್ಬಂಡೆ ಮಾತ್ರ ಬೇಸಿಗೆಯಲ್ಲಿ ಕಾಣಿಸಿಕೊಂಡು, ರಾಜ, ಾಣಿ, ರೋರರ್, ರಾಕೆಟ್‌ಗಳು ಮಾಯವಾಗಿ ನೀರು ಇಲ್ಲ, ಕಾಡು ಇಲ್ಲ, ಕಾಮನಬಿಲ್ಲು ಇಲ್ಲ. ಸಿರು ಕಾಣದ, ಹಕ್ಕಿಗಳ ಹಾರಾಟವಿಲ್ಲದ, ನೀರ ಪಸೆ ಇಲ್ಲದ ಕಡು ಕಪ್ಪು ಬಂಡೆ ಪಾತಾಳದಿಂದ ಾಕಾಶದವರೆಗೆ ಒಂದಾಗಿ ಏರುತ್ತಿರುವ ಬಿಸಿಲು ಕಾಯುತ್ತಾ ಬಿದ್ದುಕೊಂಡಿರುತ್ತದೆ. ಸಂಸಾರದೊಂದಿಗೆ ೋಗ್ ಜಲಪಾತ ವೀಕ್ಷಣೆಗೆ ಬಂದಿದ್ದ ನಿರೂಪಕನ ಕಣ್ಣಿಗೆ ಕತ್ತಲೆ ಬಂದಂತಾಗಿ “ಬನ್ನಿ ಊರಿಗೆ ೋಗೋಣ ಇಲ್ಲಿ ಏನೂ ಉಳಿದಿಲ್ಲ......ಈವತ್ತಿನವರು ಏನನ್ನೂ ಉಳಿಸಿಲ್ಲ”ಎನ್ನುತ್ತಾನೆ.

ಇಲ್ಲಿ ಕಥೆ ಹೇಳಲು ಫ್ಲ್ಯಾಷ್ ಬ್ಯಾಕ್ ತಂತ್ರವನ್ನು ಬಳಸಿದ್ದಾರೆ. ಇಲ್ಲಿ ದೊಡ್ಡ ಬಂಗಲೆಯಲ್ಲಿ ಉಳಿದುಕೊಂಡಿದ್ದ ನಿರೂಪಕರಿಗೆ ರುಜಾರಿಯ ಸ್ನೇಹಿತನಾದ ಮಹದೇವಪ್ಪ ರುಜಾರಿಯ ಕಥೆಯಲ್ಲಿ ಹೇಳುವ ತಂತ್ರವನ್ನು ಕಾದಂಬರಿಕಾರರು ಬಳಸಿಕೊಂಡಿದ್ದಾರೆ.

ಈ ಕಾದಂಬರಿಯು ಜೋಗ್ ಜಲಪಾತದ ಸುತ್ತಲಿನ ಸುಮಾರು ಐದು ದಶಕಗಳ ಇತಿಹಾಸವನ್ನು, ಶರಾವತಿ ನದಿಗೆ ಅಣೆಕಟ್ಟು ಕಟ್ಟುವುದಕ್ಕಿಂತ ಮೊದಲ ಎರಡು ದಶಕಗಳ ಹಿಂದೆ ಇದ್ದ ಪರಿಸರದ ಚಿತ್ರಣವನ್ನು ನೀಡುತ್ತದೆ. ಆ ಕಾಲದಲ್ಲಿದ್ದ ದಟ್ಟವಾದ ಕಾದು, ಜೀವಜಾಲಗಳು, ಅಣೆಕಟ್ಟನ್ನು ಕಟ್ಟುವುದಕ್ಕಿಂತ ಮುಂದಿನ ಜಲಪಾತದ ವೈಭವವನ್ನು ಗುರುತಿಸಿ ಅವರ ಸೌಂದರ್ಯವನ್ನು ಸವಿಯುವ ಸಲುವಾಗಿ, ಅಲ್ಲಿ ಒಂದು ಪ್ರವಾಸಿ ಮಂದಿರವನ್ನು ನಿರ್ಮಿಸಿ, ಅದಕ್ಕೆ ಬ್ರಿಟಿಷ್ ಬಂಗಲೆ ಎಂದು ಹೆಸರಿಸಿದ್ದರು. ಆಗಿನ ಮೈಸೂರು, ಸಂಸ್ಥಾನದಲ್ಲಿದ್ದುದರಿಂದ ಮಹಾರಾಜರು, ದಿವಾನರು ಮತ್ತು ಸಿಬ್ಬಂದಿಗಳು ಜಲಪಾತವನ್ನು ನೋಡಿ ಸಂತೋಷಪಡುವ ಸಲುವಾಗಿ ಮೈಸೂರು ಬಂಗಲೆಯನ್ನು ನಿರ್ಮಿಸಿದ್ದರು. ಆ ಪ್ರವಾಸಿ ಮಂದಿರಗಳಲ್ಲಿ ದೇಶೀ, ವಿದೇಶೀ ಜನರು ತಂಗಿದ್ದು, ಅವರ ಹವ್ಯಾಸ, ಅಭಿರುಚಿಗಳನ್ನು ಇಲ್ಲಿ ಕಾದಂಬರಿಕಾರರು ಬಿಂಬಿಸುತ್ತಾರೆ. ಮಳೆಗಾಲದ ಐದು ತಿಂಗಳು ಎಡೆಬಿಡದೆ ಸುರಿಯುವ ಮಳೆ, ಚಿರತೆ, ಹುಲಿ, ಬ್ಬಾಪಿನಂತಹ ಪ್ರಾಣಿಗಳು ಎದುರಾಗುವಿಕೆಯ ಸಂದರ್ಭಗಳನ್ನು ಕಾದಂಬರಿಕಾರರು ನಿರೂಪಿಸುತ್ತಾ, ಕಾಲದಿಂದ ಕಾಲಕ್ಕೆ ಜನರ ಪ್ರವೇಶವೂ ಯೋಜನೆಗಳ ಪ್ರವೇಶ ಪಡೆದಂತೆ ಆಗುವ ಬದಲಾವಣೆಗಳನ್ನು ಸ್ಥಿತ್ಯಂತರಗಳನ್ನು ಜೊತೆಗೆ ಗುಣ ಸ್ವಭಾವಗಳನ್ನು ಹೆಣೆಯುತ್ತಾ ಹೋಗುತ್ತಾರೆ. ಇಲ್ಲಲ್ಲಿ ಕ್ರಿಶ್ಚಿಯನ್ನರ ರೀತಿ ರಿವಾಜು, ಜೀವನಗಳ ತುಸು ಪರಿಚಯ ಮಾಡಿಸುತ್ತಾರೆ. ಮನುವೇಲ, ತಿಪಣ್ಣನಂತಹವರ ನೀಚ, ಕಪಟ ಸ್ವಾರ್ಥಗಳು, ಮಾನವನ ಪಾಶವೀ ಮನಸ್ಸಿನ ಅಕರಾಳ ವಿಕರಾಳ ಸ್ವರೂಪವನ್ನು ಪರಿಚಯಿಸುತ್ತಾರೆ. ಹಾಗೂ ಪ್ರಕೃತಿ ಸಂಪತ್ತಿನ ಮೇಲೆ ಪ್ರಗತಿಯ ಹೆಸರಿನಲ್ಲಿ ಆಗುವ ಅತ್ಯಾಚಾರ, ಅನಾಚಾರ, ಅಧಿಕಾರಶಾಹಿಗಳ ಸ್ವಾರ್ಥ, ಲೋಭ, ಕೀಳಾಟಗಳು,ಆಂಗ್ಲರ ಹಾಗೂ ಮಹಾರಾಜರಂತಹವರ ಉನ್ನತ ಜನರ ಅಭಿರುಚಿಗಳು ಅಣೆಕಟ್ಟಿನ ನಂತರದ ಜಲಪಾತದ ಪ್ರಾಕೃತಿಕ ಸ್ವರೂಪಕ್ಕೆ ಒದಗಿದ ಧಕ್ಕೆ, ನೀರಿಲ್ಲದೆ ಒಣಕಲಾದ ನದಿ, ಜಲಪಾತದ ಸ್ಥಿತಿಗಳು, ಇಂದಿನವರು ಮುಂದಿನವರಿಗೆ ಏನೂ ಉಳಿಸದಿರುವ ಬಗ್ಗೆ ಕಳಕಳಿಗಳು, ಕಾದಂಬರಿಕಾರರ ಆಶಯವನ್ನು ಕಾದಂಬರಿಯಲ್ಲಿ ಬಿಂಬಿಸುವಲ್ಲಿ ಯಶಸ್ವಿಯಾಗಿದೆ.

ಹೆಮ್ಮಿಂಗ್ ವೇ ಅವರ "The Old Man and the Sea" ಯಲ್ಲಿ ಇಡೀ ಸಮುದ್ರವೇ
ಂದು ಪಾತ್ರವಾಗುವಂತೆ ಇಲ್ಲಿ ಜಲಪಾತವೇ ಒಂದು ಪಾತ್ರವಾದಂತೆ ಕಮಡು ಬರುತ್ತದೆ. ಒಮ್ಮೊಮ್ಮೆ
ಲಪಾತದ ಕಥೆಯೋ ಅಥವಾ ರುಜಾರಿಯ ಕಥೆಯೋ ಎನಿಸಿದರೂ ಎರಡೂ ಹೊಂದಿಸುತ್ತದೆ.
ವರೆ ಇಡೀ ಕಾದಂಬರಿಯ ಉದ್ದಕ್ಕೂ ಎಲ್ಲಿಯೂ ಶರಾವತಿ ಹೆಸರು ಬರದಿರುವುದು
ಚ್ಚರಿಯೆನಿಸುತ್ತದೆ. ಜಲಪಾತಕ್ಕೆ ಮೂಲವಾದ ನದಿ, ಅದರ ಪಾತ್ರ, ವರ್ಣನೆಗಳು ಇಲ್ಲಿ
ರುವುದಿಲ್ಲ. ಆದರೂ ಜಲಪಾತದ ರುದ್ರ ರಮಣೀಯತೆಯನ್ನು ಹಲವು ವಿವರಗಳಲ್ಲಿ
ಯಶಸ್ವಿಯಾಗಿ ಹಿಡಿದಿಡುವಲ್ಲಿ ಡಿಸೋಜ ಅವರದ್ದು ಸಾರ್ಥಕ ಪ್ರಯತ್ನವಾಗಿದೆ.

**ನೀರು"**

ನಾ. ಡಿಸೋಜರವರ "ನೀರು" ಕಾದಂಬರಿಯು ಪರಿಸರದ ಹಿನ್ನೆಲೆಯಲ್ಲಿ ರಚಿತವಾದ
ಾದಂಬರಿಯಾದರೂ ಭಿನ್ನ ಕಥಾವಸ್ತುವನ್ನು ಹೊಂದಿರುವ ವಿಭಿನ್ನ ಪ್ರಯತ್ನವಾಗಿದೆ. ಕಾದಂಬರಿಯ
ೀರ್ಷಿಕೆಯು ನೀರು ಎಂದಿದ್ದರೂ, ನೀರನ್ನು ಕುರಿತಾದ ಅನೇಕ ಸಮಸ್ಯೆಗಳ ಅನಾವರಣವೇನೂ
ಲ್ಲಿ ಆಗಿಲ್ಲ. ಬದಲಿಗೆ ಒಂದು ಕಾರ್ಖಾನೆಯು ಕಲುಷಿತ ನೀರನ್ನು ನದಿಗೆ ಬಿಟ್ಟ ಪರಿಣಾಮವಾಗಿ ಆ
ೀರನ್ನು ಬಳಸಿದ ಜನರು ಚರ್ಮವ್ಯಾಧಿಗೆ ತುತ್ತಾದಾಗ ಅದರ ಮೂಲವನ್ನು ಗುರುತಿಸದ ಜನ
ೇಗೆ ಮೌಢ್ಯದ ಮೊರೆ ಹೋಗುತ್ತಾರೆ ಮತ್ತು ಜನರ ಅಜ್ಞಾನ ಮೂಢನಂಬಿಕೆಗಳನ್ನು ಹೇಗೆಲ್ಲಾ
ಗದು ಮಾಡಿಕೊಳ್ಳಲು ಸ್ವಾರ್ಥಪರರು ಹುನ್ನಾರ ನಡೆಸುತ್ತಾರೆ ಹಾಗೂ ಬಂಡವಾಳ ಶಾಹಿಗಳು
ಾಜಕೀಯ ಪ್ರಭಾವವನ್ನು ಬಳಸಿಕೊಂಡು ಜನ ಸಾಮಾನ್ಯರನ್ನು ಹೇಗೆಲ್ಲಾ ವಂಚಿಸುತ್ತಾರೆ
ಂಬುದರ ಚಿತ್ರಣವೊಂದರ ಸಾಧಾರಣ ವಸ್ತು ಈ ಕಾದಂಬರಿಯದಾಗಿದೆ.

ಆದಿ ಕಾಲದಿಂದಲೂ ಮಾನವನು ತನ್ನ ಬುದ್ಧಿಬಲದಿಂದ ವಿಕಾಸಶೀಲ ಪ್ರವೃತ್ತಿಯನ್ನು
ಳೆಸಿಕೊಳ್ಳುತ್ತಾ ತನ್ನ ಆಹಾರ, ವಸತಿಗಳಿಗೋಸ್ಕರ ಹುಡುಕಾಟ ನಡೆಸುತ್ತಾ, ಹೊಸ ಪ್ರಯತ್ನವನ್ನು,
ಂಶೋಧನೆಗಳನ್ನು ಪ್ರಯೋಗಗಳನ್ನು ಕೈಗೊಳ್ಳುತ್ತಿದ್ದಾನೆ. ಜೊತೆ ಜೊತೆಗೆ ತನಗೆ, ತನ್ನವರಿಗೆ
ೋಸ ಮಾಡುತ್ತ ಬಂಡವಾಳ ತಮ್ಮ ಬಂಡವಾಳವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ, ಕೈಗಾರಿಕೆ.
ುದ್ಯಮಗಳನ್ನು ಸ್ಥಾಪಿಸಿ, ಕಾರ್ಖಾನೆಯಿಂದ ಹೊರಬಿಡುವ ನೀರನ್ನು ಶುದ್ಧೀಕರಿಸದೇ ನದಿ
ಳ್ಳಗಳಿಗೆ ಬಿಟ್ಟು ಅದನ್ನು ಕಲುಷಿತಗೊಳಿಸುತ್ತಾರೆ. ಅದನ್ನು ಮುಗ್ಧತೆಯಿಂದ ಬಳಸಿದ ಜನರಿಗೆ.

ಗುವ ಆರೋಗ್ಯ ಹಾನಿ, ಅದು ಜನಸಾಮಾನ್ಯರಲ್ಲಿ ಅರಿವಿನ ಕೊರತೆಯಿಂದ ಪಡೆದುಕೊಳ್ಳುವ ುವುಗಳು, ಸ್ವಾರ್ಥ ಜನರು ಅಲ್ಲಿ ಹುಟ್ಟು ಹಾಕುವ ವಿಪ್ಲವಗಳು ಈ ಕಾದಂಬರಿಯಲ್ಲಿ ಕ್ತವಾಗುತ್ತವೆ. ಇಲ್ಲಿನ ಘಟನೆಗಳು ಸರಳ ನಿರೂಪಣೆಯಲ್ಲಿದ್ದು ಒಂದಕ್ಕೊಂದು ಪೂರಕವಾಗಿ ೂಡಿಬರುತ್ತವೆ. ತಮಗೆ ತೋಚಿದ ಸರಳ ಸಮಸ್ಯೆಯನ್ನು ಸರಳ ನಿರೂಪಣೆಯ ಮೂಲಕ ಮಾಜಿಕ ಸ್ಥಿತ್ಯಂತರವನ್ನು ಆ ಪರಿವರ್ತನೆಯಿಂದಾಗಿ ಉಂಟಾಗುವ ಸಂಘರ್ಷವನ್ನು ಗ್ಗಂಟುಗಳಿಲ್ಲದೆ ಹೆಣೆಯುವಲ್ಲಿ ಡಿಸೋಜರವರು ಯಶಸ್ವಿಯಾಗಿದ್ದಾರೆ.

ಆದರ್ಶವಾದಿ ಯುವಕ ಡಾ.ಕೇಶವಮೂರ್ತಿ, ಗುಡ್ಡೇ ಹೊಸಳ್ಳಿಯಲ್ಲಿ ಕ್ಲಿನಿಕ್ ಒಂದನ್ನು ರೆದಿರುತ್ತಾನೆ. ಅಲ್ಲಿದ್ದ ಕಾಗದ ಕಾರ್ಖಾನೆಯು ಶುದ್ಧೀಕರಿಸದೇ ಕಲುಷಿತ ನೀರನ್ನು ಮಂದಾವತಿ ನದಿ ೀರಿಗೆ ಬಿಟ್ಟ ಪರಿಣಾಮವಾಗಿ ಆ ನೀರಿನ ಬಳಕೆಯಿಂದಾಗಿ ಅಲ್ಲಿನ ಜನರಿಗೆ ಒಂದು ಬಗೆಯ ರ್ಮವ್ಯಾಧಿ ಕಾಣಿಸಿಕೊಳ್ಳುತ್ತದೆ. ಡಾ.ಮೂರ್ತಿಯ ಔಷಧಿಗೆ ಅದು ವಾಸಿಯಾದಂತೆ ಕಂಡು ಂದರೂ ಇದ್ದಕ್ಕಿದ್ದಂತೆ ಉಲ್ಬಣಿಸಿ, ಅವನ ವೈದ್ಯಕೀಯ ಕ್ಷೇತ್ರಕ್ಕೆ ಸವಾಲಾಗಿರುತ್ತದೆ. ಅವನಲ್ಲಿದ್ದ ್ಯದ್ಯಕೀಯ ಕೊರತೆಯಿಂದಾಗಿ, ಅದನ್ನು ಸಂಪೂರ್ಣ ಗುಣಪಡಿಸಲು ಸಾಧ್ಯವಾಗಿರುವುದಿಲ್ಲ. ರ್ಮವ್ಯಾಧಿಗೆ ಕಲುಷಿತ ನೀರೇ ಕಾರಣ ಎಂದು ತಿಳಿದಿದ್ದರೂ, ಅಲ್ಲಿನ ಪೂಜಾರಿ ಅದಕ್ಕೆ ನೀರಮ್ಮನ ೋಪವೇ ಕಾರಣ ಎಂದು ಜನರಲ್ಲಿ ಮೂಢನಂಬಿಕೆಯನ್ನು ಬಿತ್ತಿ ತನ್ನ ಸ್ವಾರ್ಥ ಸಾಧಿಸಿಕೊಳ್ಳಲು ್ರಯತ್ನಿಸುತ್ತಾನೆ. ಕಾರ್ಖಾನೆ ಮಾಲೀಕರ ಬಂಡವಾಳ ಶಾಹಿ ಪ್ರವೃತ್ತಿ, ಅಲ್ಲಿನ ಜನರ ಅನುಕೂಲ ಂಧು ಪ್ರವೃತ್ತಿಯಿಂದ ಕೇಶವಮೂರ್ತಿಯ ಪ್ರಾಮಾಣಿಕ ಪ್ರಯತ್ನಗಳೆಲ್ಲವೂ ವಿಫಲವಾಗುತ್ತವೆ. ಅಲ್ಲಿ ಡೆಯುವ ಚಳುವಳಿಗಳೆಲ್ಲವೂ ವಿಫಲವಾಗುತ್ತದೆ. ಕೊನೆಗೆ ಕೇಶವಮೂರ್ತಿ ಪರಿಸರವಾದಿಗಳ ಬೆಂಬಲವನ್ನು ಪಡೆದು ಚಳವಳಿಗೆ ಹೊಸ ತಿರುವನ್ನು ನೀಡುತ್ತಾನೆ. ಆದರೆ ಅದನ್ನು ಸಹ ಾರ್ಖಾನೆಯ ಮಾಲೀಕರು ಹತ್ತಿಕ್ಕುವಲ್ಲಿ ಪ್ರಯತ್ನಿಸಿ ಯಶಸ್ವಿಯಾಗುತ್ತರೆ.

ಈ ಕಾದಂಬರಿಯಲ್ಲಿ ಕಾದಂಬರಿಕಾರರು ಸರಳ ಪಾತಳಿಯ ಮೇಲೆ ಕಥೆಯನ್ನು ರೂಪಿಸುತ್ತಾರೆ. ಬಂಡವಾಳ ಶಾಹಿ ಪ್ರವೃತ್ತಿ, ಮೂಢನಂಬಿಕೆಗಳ ವೈಭವೀಕರಣ, ವಿದ್ಯಾವಂತರ ಸ್ವಾರ್ಥ ಹೋರಾಟದಂತಹ ಉತ್ಕೃಷ್ಟ ವಸ್ತುಗಳನ್ನು ಹೊಂದಿದ್ದರೂ, ಅವುಗಳಲ್ಲಿ ಘನೀಭವಿಸಿದ ವಸ್ತುಗಳಿಗೆ ಒತ್ತುಸಿಗದೆ ಸೊರಗಿ ಬಿಡುತ್ತವೆ. ನದಿಯ ದಂಡೆಯ ಮೇಲೆ ವಾಸಿಸುವ ಜನರಿಗೆ ಕಾಗದ

ರ್ಖಾನೆಯಿಂದ ಕಲುಷಿತಗೊಂಡ ನೀರು ಕಪ್ಪಗೆ ಎಣ್ಣೆ ಪಸೆ, ವಾಸನೆಯಿಂದ ಕೂಡಿ ರಿಯುತ್ತಿರುವ ಮಲಿನ ನೀರನ್ನು ಕುಡಿಯುವ ಅನಿವಾರ್ಯತೆಯನ್ನು ಬಿಂಬಿಸುವ ಯತ್ನ ಲ್ಲದಿರುವುದು ಕಂಡು ಬರುತ್ತದೆ. ಇಲ್ಲಿ ಚಳುವಳಿಯಿಂದ ಬಂಡಾಯದ ಪ್ರಬಲ ಮಾಧ್ಯಮವನ್ನು ವಸ್ಥಿತವಾಗಿ ಬಳಸಿದ್ದರೂ, ಅದರ ಉದ್ವಿಗ್ನತೆಯಾಗಲೀ, ಉನ್ಮಾದ ಸ್ಥಿತಿಗಳಾಗಲೀ ಕ್ತವಾಗುವುದಿಲ್ಲ. ಆಷಾಡಭೂತಿ ಪೂಜಾರಿ ಲಿಂಗಪ್ಪನ ಬಗ್ಗೆ ಆಕ್ರೋಶವಾಗಲಿ, ವಿದ್ಯಾವಂತ ಂದ್ರಣ್ಣನ ತರ್ಕದ ಬಗ್ಗೆ ಅಸಹನೆಯಾಗಲಿ ಉಂಟಾಗುವುದಿಲ್ಲ. ಡಾ.ಕೇಶವಮೂರ್ತಿಯ ಮೇಲೆ ಡೆಸುವ ವ್ಯವಸ್ಥಿತ ಹಲ್ಲೆಯು ಓದುಗರ ಮನಸ್ಸನ್ನು ಕಲಕುವುದಿಲ್ಲ. ಡಾ.ಮೂರ್ತಿಯ ಎದೆಗೆ ಾಕಿದ ಚೂರಿ ವಿಚಾರವೂ ಒಂದು ಸಾಮಾನ್ಯ ಘಟನೆಯಂತೆ ಪೇಲವವಾಗಿ ಪರಿಣಮಿಸುತ್ತದೆ. ೂಜಾರಿ ಲಿಂಗಪ್ಪನ ತಲೆ ಒಡೆಯಿತು, ಡಾ.ಕೇಶವಮೂರ್ತಿ ಎದೆಗೆ ಯಾರೋ ಚಾಕುವಿನಿಂದ ಿದರು, ಯಜಮಾನ ತಿಪ್ಪಯ್ಯ ಅಲ್ಲೇ ಕುಸಿದು ಬಿದ್ದ, ಎಂಬಂತೆ ಇವು ವರದಿಯ ಹಾಗೆ ರೂಪಿತವಾಗಿರುವುದನ್ನು ಕಾಣಬಹುದಾಗಿದೆ.

ಡಾ.ಮೂರ್ತಿಯವರು ಮಂದಾವತಿ ನೀರೇ ಕಾಯಿಲೆಗೆ ಕಾರಣವೆಂದು ತಿಳಿಸಿದರೂ ದನ್ನು ಬಳಸದಿರಲು ಎಲ್ಲಿಯೂ ಜನರನ್ನು ಒತ್ತಾಯಿಸುವುದಿಲ್ಲ. ಕೆಲವೊಂದು ಜನರನ್ನಾದರೂ ದಿಯ ನೀರಿನ ಬಳಕೆಯಿಂದ ಬಿಡಿಸಿ, ಅವರಿಗೆ ಚಿಕಿತ್ಸೆ ಕೊಡಿಸಿ ಫಲಕಾರಿಯಾಗುವುದಿಲ್ಲ. ಸಮಸ್ಯೆಗೆ ೂಲ ಪರಿಹಾರವಿದ್ದರೂ ಅದನ್ನು ಕಾದಂಬರಿಕಾರರು ಎಲ್ಲಿಯೂ ಅನಾವರಣಗೊಳಿಸುವುದಿಲ್ಲ. ಜ್ಞಾನ ಹಾಗೂ ಮೂಢನಂಬಿಕೆಗಳ ಸಮಸ್ಯೆ ಹಾಗೂ ಸಂಘರ್ಷವನ್ನು ಮಾತ್ರ ನಾವಿಲ್ಲಿ ಾಣಬಹುದಾಗಿದೆ. ಒಟ್ಟಿನಲ್ಲಿ ಕಾದಂಬರಿಕಾರರ ಆಶಯವನ್ನು ಗ್ರಹಿಸಲು ಓದುಗರಿಗೆ ತೊಂದರೆ ಿನೂ ಇಲ್ಲ. ಈ ಹಿನ್ನೆಲೆಯಲ್ಲಿ ಇದೊಂದು ಸಾಧಾರಣ ಕಾದಂಬರಿ.

**ವಿಷಾನಿಲ"**

ನಾ.ಡಿಸೋಜರವರ ಕೃತಿಗಳು ಸಾಮಾನ್ಯವಾಗಿ ಸಾಮಾಜಿಕ, ಐತಿಹಾಸಿಕ, ಸಾಂಸ್ಕೃತಿಕ ುತ್ತು ಪ್ರಾಕೃತಿಕ ಅಂಶಗಳಲ್ಲಿ ಕಾಲದಿಂದ ಕಾಲಕ್ಕೆ ಉಂಟಾಗುವ ಸ್ಥಿತ್ಯಂತರಗಳನ್ನು ಅವುಗಳಿಂದ ಉಂಟಾದ ಅಧಃಪತನವನ್ನು ಹಾಗೂ ಅಂತ್ಯದಲ್ಲಿ ಅವುಗಳಿಂದ ಉಂಟಾಗುವ ಘೋರ ಪರಿಣಾಮವನ್ನು ಬಿಂಬಿಸುತ್ತವೆ.

ಡಿಸೋಜರವರು ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಹಚ್ಚ ಹಸಿರಿನ ಪ್ರಕೃತಿ, ಆಧುನಿಕತೆಯ ...ಂಕಿಲ್ಲದ ಮುಗ್ಧ ಸುಖೀ ಜನ, ಅವರ 'ಆಚಾರ ವಿಚಾರ' ನೆಮ್ಮದಿಗಳನ್ನು ನಿರೂಪಿಸುತ್ತಾರೆ. ...ತರ ಅಂತಹ ಒಂದು ಪ್ರದೇಶದ ಮೇಲೆ ಯಾವುದಾದರೂ ಒಂದು ರೂಪದಿಂದ ಬರುವ ...ಧುನಿಕತೆಯ ದಾಳಿ, ಅದರಿಂದ ಅಲ್ಲಿ ಉಂಟಾಗುವ ಸಾಂಸ್ಕೃತಿಕ ಬದಲಾವಣೆ, ಅಲ್ಲೋಲ ...ಲ್ಲೋಲಗಳು, ಕೊನೆಗೆ ಉಂಟಾಗುವ ದುರಂತ ಇವು ಇಲ್ಲಿನ ವಸ್ತುಗಳಾಗಿವೆ. ಸಮಕಾಲೀನ ...ದುಕಿಗೆ ತೆರೆದುಕೊಂಡಂತಹ ಪ್ರತಿಯೊಂದು ಗ್ರಾಮ, ಊರು, ನಗರ, ಪಟ್ಟಣಗಳಲ್ಲಿ ತಲೆ ...ಎತ್ತುತ್ತಿರುವ ಕಾರ್ಖಾನೆಗಳಿಂದ ಉಂಟಾಗುವ ಪರಿಸರದ ಕಲುಷಿತತೆಯೊಂದಿಗೆ ಮಾನವೀಯ ...ಮೌಲ್ಯಗಳ ಕುಸಿತ ಇವುಗಳೇ 'ವಿಷಾನಿಲ' ಕಾದಂಬರಿಗೆ ವಸ್ತುವಾಗಿದೆ.

ಅವರ ಎಲ್ಲಾ ಕಾದಂಬರಿಗಳಲ್ಲಿ ಕಂಡು ಬರುವ ಪ್ರಕೃತಿ ಹಾಗೂ ಐತಿಹಾಸಿಕ ಹಿನ್ನೆಲೆ ಈ ...ಕಾದಂಬರಿಯಲ್ಲಿಯೂ ಕಂಡುಬರುತ್ತವೆ. ಶಾಂತಿಗೆರೆ ಎನ್ನುವ ಹೆಸರಿಗೆ ತಕ್ಕಂತೆ ಆ ಊರಿನಲ್ಲಿ ...ಶಾಂತಿ ನೆಲೆಸಿದ್ದು, ಜನ ಸಮೃದ್ಧ ಬದುಕನ್ನು ಅನುಭವಿಸುತ್ತಾ ನೆಮ್ಮದಿಯಾಗಿ ಜೀವನವನ್ನು ...ನಡೆಸುತ್ತಿರುತ್ತಾರೆ. ಅಲ್ಲಿನ ರಾಮೇಶ್ವರ ದೇವಾಲಯ, ಕೆರೆ, ಹೊಲ, ಕಾಡುಗುಡ್ಡಗಳ ವರ್ಣನೆಯೂ ...ಇಲ್ಲಿ ಸೊಗಸಾಗಿ ಮೂಡಿಬಂದಿದೆ. ಇಂತಹ ಪ್ರದೇಶಕ್ಕೆ ಗೊಬ್ಬರ ಕಾರ್ಖಾನೆ ಬಂದದ್ದೇ ಆಯಿತು, ...ಅಲ್ಲಿನ ಜನ ಜೀವನ ಅಸ್ತವ್ಯಸ್ತವಾಗುವುದನ್ನು ಕಾಣುತ್ತೇವೆ. ಅದುವರೆಗೂ ಇಲ್ಲದ ರಾಜಕೀಯ, ...ಒಬ್ಬರನ್ನು ಒಬ್ಬರು ತುಳಿದು ಮೇಲೆ ಬರಬೇಕೆನ್ನುವ ಸ್ವಾರ್ಥ, ಅದಕ್ಕಾಗಿ ನಡೆಸುವ ಮೋಸ ...ವಸಲತ್ತು ಎಲ್ಲವೂ ಅಲ್ಲಿ ತಲೆ ಎತ್ತುತ್ತವೆ. ಜೊತೆಗೆ ಊರು ದೊಡ್ಡದಾಗುತ್ತಿದ್ದ ಹಾಗೆ, ನಾಗರೀಕತೆ ...ಬೆಳೆಯುತ್ತಾ ಹೋದ ಹಾಗೆ ಜನರ ಮನೋಭಾವನೆ ಬದಲಾಗುತ್ತಾ ಹೋಗಿ ಈ ವಿಷಾನಿಲ ...ಎಲ್ಲೆಡೆಗೂ ಸಾಂಕ್ರಾಮಿಕ ರೋಗದಂತೆ ವ್ಯಾಪಿಸುತ್ತಾ ಹೋಗುವುದನ್ನು ಕಾಣಬಹುದಾಗಿದೆ.

ಊರಿನ ಗಣ್ಯ ವ್ಯಕ್ತಿಗಳಾದ, ಶಿವರಾಮಯ್ಯ, ರಾಮಕೃಷ್ಣಯ್ಯ ಇವರು ಊರಿನಲ್ಲಿ ...ಯಾವುದೇ ಭಿನ್ನಾಭಿಪ್ರಾಯವಿಲ್ಲದೇ, ಸೌಹಾರ್ದಯುತ ವಾತಾವರಣವನ್ನು ಸೃಷ್ಟಿಸಿ ಊರಿನ ...ಅಭಿವೃದ್ಧಿಗಾಗಿ ಕಂಕಣತೊಟ್ಟು, ಊರಿಗೆ ನಾಗರಿಕ ಸೌಲಭ್ಯಗಳಾದ ಶಾಲೆ, ಪ್ರಾಥಮಿಕ ಆರೋಗ್ಯ ...ಕೇಂದ್ರ, ದೀಪ ಮುಂತಾದವೆಲ್ಲವನ್ನು ತಂದಿದ್ದಾರೆ. ಊರಿನಲ್ಲಿ ಒಂದು ಗೊಬ್ಬರದ ಕಾರ್ಖಾನೆಯನ್ನು ...ಸ್ಥಾಪಿಸಲು ಕಂಪನಿಯವರು ಮುಂದೆ ಬಂದಾಗ ಎಲ್ಲರೂ ಹಿಗ್ಗುತ್ತಾರೆ. ಕಾರ್ಖಾನೆಯ ಸ್ಥಾಪನೆಗಾಗಿ

ಶರಾಮಯ್ಯ ಹಾಗು ರಾಮಕೃಷ್ಣಯ್ಯನವರ ಜಮೀನನ್ನು ಕೊಳ್ಳುವುದೆಂಬ ಒಪ್ಪಂದವಿದ್ದರೂ. ವರಾಮಯ್ಯನ ಭಾವಮೈದ ವೀರಭದ್ರ ಶಿವರಾಮಯ್ಯನವರದಷ್ಟೇ ಮಾರಾಟ ಮಾಡಿಸುವ ಸಲತ್ತು ಮಾಡಿ ಅದಕ್ಕಾಗಿ ಆತ ರಾಮಕೃಷ್ಣಯ್ಯನವರಿಗೆ ಜಮೀನು ಭೋಗ್ಯ ಹಾಕಿದ ಮನುಷ್ಯನನ್ನು ಡುಕಿ, ಆತ ಸತ್ತು ಹೋಗಿರಲಾಗಿ ಆತನ ಕುಡುಕ ಮಗನನ್ನು ಹುಡುಕಿ, ಅರ್ಜಿ ಬರೆದು ಆತನಿಂದ ಟ್ಟೆಟ್ಟು ಒತ್ತಿಸಿ, ಆ ಉದ್ಯಮದ ಎಂ.ಡಿ.ಗೆ ಕಳುಹಿಸುತ್ತಾನೆ. ರಾಮಕೃಷ್ಣಯ್ಯನವರ ಜಮೀನು ರಾರಿನದು ಎಂಬ ಭಾವನೆ ಬರುವಂತೆ ಮಾಡಿ ಶಿವರಾಮಯ್ಯನವರದ್ದೇ ನಲವತ್ತು ಎಕರೆ ಮೀನನ್ನುಕೊಳ್ಳುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಅದುವರೆಗೆ ವಿಶ್ವಾಸದಿಂದ ಇದ್ದ ವರಾಮಯ್ಯ, ರಾಮಕೃಷ್ಣಯ್ಯನವರಲ್ಲಿ ಇದರಿಂದಾಗಿ ಅಸಮಧಾನ ಅಂಕುರಿಸುತ್ತದೆ.

ಕಾರ್ಖಾನೆಯ ನಿರ್ಮಾಣ ಕಾರ್ಯ ಪ್ರಾರಂಭವಾಗುತ್ತಿದ್ದ ಹಾಗೆ, ಅದುವರೆಗೂ ಬಾರದ ಲೋಚನೆಗಳು ಜನರಲ್ಲಿ ಬರತೊಡಗುತ್ತದೆ. ಎಲ್ಲಿ ಅಂಗಡಿ, ಹೋಟೇಲು ಪ್ರಾರಂಭಿಸಿದರೆ ವ್ಯಾಪಾರ ದುರುತ್ತದೆ, ತಮ್ಮ ಜಮಿನಿಗೆ ಒಂದಕ್ಕೆರಡು ರೇಟು ಬರುವುದಾದರೆ ಯಾಕೆ ಮಾರಬಾರದು ನ್ನುವ ವಿಚಾರ, ಪ್ರತಿಯೊಬ್ಬರಿಗೂ ಸುಲಭದಲ್ಲಿ ದುಡ್ಡು ಮಾಡುವುದು ಹೇಗೆ ಎಂಬ ಚಿಂತೆ ಡುತ್ತದೆ. ಅನೇಕರು ನಿವೇಶನಕ್ಕಾಗಿ ಹೊಲಗದ್ದೆಗಳನ್ನು ಮಾರುತ್ತಾರೆ. ಕಾರ್ಖಾನೆ ಕೆಲಸ ರ್ವಹಿಸುವ ಮೇಸ್ತ್ರಿ ಜನರ ಕೂಲಿಗಳಿಗೆ ಮೋಸ ಮಾಡಿ, ದುಡ್ಡು ಹೊಡೆಯುವ ರೀತಿ, ಒಬ್ಬರಿಂದ ಬ್ಬರು, ಒಬ್ಬರಿಂದ ಅನೇಕರು ಹೇಗೆ ಮೋಸ ಹೋಗುತ್ತಾರೆ ಎಂಬುದನ್ನು ಬಹಳ ಸೊಗಸಾಗಿ ತ್ರಿಸಿದ್ದಾರೆ. ಊರು ಹೋಗಿ ಪೇಟೆಯಾಗುವ ಪರಿ, ನವನಾಗರೀಕತೆ ಬೆಳೆಯುತ್ತಾ ಹೋದಂತೆಲ್ಲಾ ನರ ಬದುಕು ಸಂಕೀರ್ಣವಾಗುತ್ತಾ ಹೋಗುವುದನ್ನು ನಾವಿಲ್ಲಿ ಕಾಣಬಹುದಾಗಿದೆ.

ಊರು ಹೋಗಿ ಪೇಟೆಯಾದ ಅನುಭವ ಬಂದಾಗ ಕೆಲವರಿಗಾದರೂ ಉಂಟಾಗುವ ೋವು ಈ ಮಾತಿನಲ್ಲಿ ಧ್ವನಿಸುವುದನ್ನು ಕಾಣಬಹುದು. "ಅಲ್ಲಕಣ್ರಣ್ಣ ಹೊಲಗಳನ್ನೆಲ್ಲಾ ಅಂಗಡಿ ೋಟೇಲು ಅಂತ ಮಾಡಿದ್ರೆ ನಾಳೆ ಜನ ಏನು ತಿನ್ನೋದು......"[8] ಎನ್ನುವಲ್ಲಿ ವಿಷಾದದ ಛಾಯೆ ರುವುದನ್ನು ಕಾಣಬಹುದಾಗಿದೆ. ರಾಮಕೃಷ್ಣಯ್ಯ, ಶಿವರಾಮಯ್ಯ, ಗುಂಡಾಭಟ್ಟ, ವೀರಭದ್ರಯ್ಯ, ೋಟೇಲು ಮಾಲೀಕ ಗೋಪಾಲಪ್ಪ, ರಾಮಚಂದ್ರಪ್ಪ, ಮುಂತಾದ ಅನೇಕ ಪಾತ್ರಗಳು ಓದುಗರ ಮನಸ್ಸಿನಲ್ಲಿ ಅಚ್ಚಳಿಯದೆ ನಿಲ್ಲುತ್ತವೆ.

ಕೊನೆಗೆ ಕೀಟನಾಶಕ ತಯಾರಿಸುವ ಕಾರ್ಖಾನೆಯಲ್ಲಿ ವಿಷಾನಿಲ ತುಂಬಿಸಿದ್ದ ...ಟ್ಟಿಯಿಂದ ವಿಷಾನಿಲವು ಹೊರಬಿದ್ದು ಶಾಂತಿಗೆರೆ ನೆಲೆಸಮವಾಯಿತು ಎಂಬುದನ್ನು ವರದಿಯಂತೆ ...ೂಪಿಸಲಾಗುತ್ತದೆ. ಭಾಷೆ ಸರಳವಾಗಿದ್ದು, ಕಾರ್ಖಾನೆಯ ನಿರ್ಮಾಣದ ಹಂತದಲ್ಲಿ ಹಾಗೂ ...ತರ ಜನರ ಮನೋಭಾವದಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಗುರುತಿಸುವಲ್ಲಿ ಕಾದಂಬರಿಕಾರರು ...ಲರಾಗಿದ್ದಾರೆ. ಕಾದಂಬರಿಕಾರರು ಇಲ್ಲಿ ಹೊರಗಿನಿಂದಲೇ ನೇರವಾಗಿ ಕಥೆಯನ್ನು ಹೇಳುತ್ತಾರೆ. ...ೂಪಣೆಯು ಸರಳವಾಗಿದ್ದು, ಸಂಭಾಷಣೆಯೂ ಸಂಕ್ಷಿಪ್ತವಾಗಿದ್ದು ವಿಷಯಾನುಕ್ರಮಣೆಯು ...ಕ್ಷಿಪ್ತವಾಗಿದೆ. ಕಾದಂಬರಿಕಾರರ ಆಶಯಗಳನ್ನು ಅರ್ಥೈಸಿಕೊಳ್ಳುವಲ್ಲಿ ಓದುಗರಿಗೆ ಯಾವುದೇ ...ಂದರೆಯಾಗುವುದಿಲ್ಲ.

**"ಚಿನ್ನದ ಮೊಟ್ಟೆ"**

"ಚಿನ್ನದ ಮೊಟ್ಟೆ" ಕಾದಂಬರಿಯ ವಸ್ತು ಸಾಮಾನ್ಯವಾದುದಾಗಿದೆ. ಒಂದು ಸುಖೀ ...ವನ ನಡೆಸುತ್ತಿದ್ದ ಹಳ್ಳಿ, ಹಣದ ಪ್ರವೇಶದಿಂದಾಗಿ ಹೇಗೆ ಅಧಃಪತನಕ್ಕೆ ಇಳಿಯುತ್ತದೆ ಎನ್ನುವುದು ...ದರ ಕಥಾ ವಸ್ತು. ಡಾಕ್ಟರ್‌ರೊಬ್ಬರ ಮನೆ ನಿವೇಶನಕ್ಕಾಗಿ ನಿರೀಕ್ಷೆಗಿಂತ ಅಧಿಕವಾಗಿ ನೀಡುವ ...ಣದ ಮೊತ್ತ, ಅಲ್ಲಿಂದ ಪ್ರಾರಂಭಗೊಂಡು, ಕಟ್ಟಡದ ನಿರ್ಮಾಣಕ್ಕಾಗಿ ನೀರನ್ನು ...ಂಡುಕೊಳ್ಳುವುದರಿಂದ ಹಿಡಿದು ಮನೆಗೆ ಬೇಕಾದ ಮರವನ್ನು ಕಡಿಮೆ ಬೆಲೆಗೆ ...ಂಡುಕೊಂಡುದರ ಪರಿಣಾಮವಾಗಿ ಮನುಷ್ಯನ ಶಾಂತಿ ಕದಡಿ ಅಶಾಂತನಾಗುವುದು ಮುಂತಾದ ...ಷಯವನ್ನೊಳಗೊಂಡು ಕಥೆ ಸಾಗುತ್ತದೆ.

ಮನುಷ್ಯ ದುರಾಸೆಯ ಮೊಟ್ಟೆ ಕೋಳಿ. ಸಾಮಾನ್ಯ ಮೊಟ್ಟೆಯನ್ನು ಕೊಟ್ಟರೆ ಅದು ...ಳ್ಳೆಯದು. ಬದಲಿಗೆ ಚಿನ್ನದ ಮೊಟ್ಟೆಯನ್ನು ಕೊಟ್ಟರೆ, ಅದರಿಂದ ಅನರ್ಥಗಳೇ ಹೆಚ್ಚು ಎನ್ನುವ ...ಷಯವನ್ನು ವಸ್ತುವನ್ನಾಗಿ ಉಳ್ಳ ಕಾದಂಬರಿ 'ಚಿನ್ನದ ಮೊಟ್ಟೆ'.

ಮಾನವನ ಬದುಕಿನಲ್ಲಿ ಆಸೆ ಮುಖ್ಯ, ಆಸೆಯೇ ಇಲ್ಲದಿದ್ದರೆ, ಬದುಕುವ ಮೂಲಭೂತ ...ಲೆಯೇ ಇಲ್ಲವಾಗಿ, ಬದುಕಿಗೆ ಯಾವುದೇ ಅರ್ಥ ಇಲ್ಲವಾದಂತಾಗುತ್ತದೆ. ಆದರೆ ಅದೇ ಆಸೆ

ವಾಸೆಯಾಗಬಾರದು. ತನ್ನ ಪಾಲಿನದು ತನಗೆನ್ನುವುದು ಸರಿ, ಆದರೆ ಬೇರೆಯವರದ್ದೂ ತನಗೇ ಕೆನ್ನುವುದು ಸರಿ ಅಲ್ಲ–ಈ ನಿಟ್ಟಿನಲ್ಲಿ ಹರಟ ಕಾದಂಬರಿ ಚಿನ್ನದ ಮೊಟ್ಟೆಯಾಗಿದೆ. ತನಗೊಂದು ನೆಯನ್ನು ಕಟ್ಟಿಕೊಳ್ಳ ಬಯಸುವ ಕಥಾನಾಯಕ ಡಾ.ನೀಲಕಂಠನ ಮನೆಯ ಕರಡು ಯೊಂದಿಗೆ ಆರಂಭವಾಗುವ ಕಾದಂಬರಿ 'ಶಾಂತಿನಿವಾಸ' ನಿರ್ಮಾಣಗೊಂಡರು. ಅದರ ರ್ಮಾಣದ ಒದೊಂದು ಹಂತದಲ್ಲೂ ಮೂಡಿ ಬಂದ ಅಶಾಂತಿ, ಅಸಮಧಾನ, ಅತೃಪ್ತಿಯ ಹಾಪೂರವನ್ನೇ ಕಟ್ಟಿಕೊಂಡು ನಿಂತಿದೆ. ಪ್ರಕೃತಿದತ್ತವಾಗಿ ಬಂದಿದ್ದ ಮನೆಯ ಹಿತ್ತಲಿನಲ್ಲಿದ್ದ ಬಾವಿಯನ್ನು, ಗದ್ದೆಯಲ್ಲಿದ್ದ ದೊಡ್ಡ ಬಂಡೆಯನ್ನು, ಮನೆಯ ಹಿಂಭಾಗದಲ್ಲಿ ಬೆಳೆದಿದ್ದ ತೇಗ–ಟೆ ಮರಗಳನ್ನು ಹಣವಾಗಿ ಪರಿವರ್ತಿಸುವ ನಿಟ್ಟಿನಲ್ಲಿ, ಪ್ರಕೃತಿಯನ್ನು ನಗದನ್ನಾಗಿ ಮಾಡಿಕೊಳ್ಳುವ ತಿಯನ್ನು ಕಾದಂಬರಿಕಾರರು ಚೆನ್ನಾಗಿ ವರ್ಣಿಸಿದ್ದಾರೆ. ಈ–ಎಲ್ಲಾ ವ್ಯವಹಾರಕ್ಕೆಂದೇ ಮೀಸಲಾದ ಧ್ಯವರ್ತಿ ಮೇಸ್ತ್ರಿ ವೇಲಾಯುಧನ್‌ನ ವರ್ತನೆ ಕಾದಂಬರಿಯ ಆರಂಭದಲ್ಲಿ ಸಹಜ ಎನಿಸಿದರೂ ನ್ನ ಚಾಲಾಕಿತನದಿಂದ ಒಂದು ಸಂಸಾರದ ಬಿರುಕಿಗೆ ಕಾರಣನಾಗುತ್ತಾನೆಂದು ತಿಳಿಸುವಲ್ಲಿ ಅತನ ತ್ರದ ಬೆಳವಣಿಗೆ ಸಹಜವಾಗಿಯೇ ಬಂದಿದೆ.

ವ್ಯರ್ಥವಾಗಿ ಬಿದ್ದಿದ್ದ ಖಾಲಿ ಜಾಗಕ್ಕೆ ಅತೀ ಬೆಲೆ ಬಂದಾಗ ಮರುಳಾದ ಮೈಲಪ್ಪ ವನ್ನು ಮಾರಿ, ಸಣ್ಣ ಮನೆಯೊಂದನ್ನು ತನ್ನ ಮನೆಯ ಪಕ್ಕ ನಿರ್ಮಿಸಲು ತೊಡಗಿ, ತನ್ನ ಇಚ್ಛೆ ರ್ಣವಾಗದೇ ಬರೀ ಕಂಬಗಳು ಗೋಡೆಗಳನ್ನು ಮಾತ್ರ ನೋಡುತ್ತಾ ಕುಳಿತುಕೊಳ್ಳಬೇಕಾಗುತ್ತದೆ. ಗಾರದಂತಹ ಜಮೀನಿನಲ್ಲಿದ್ದ ಬಂಡೆಯನ್ನು ಹಣದಾಸೆಗೆ ತೆಗೆದು ಒಂದು ಕಾಳು ಛತ್ರವನ್ನು ಯಲಾಗದೆ ನೀರು ತುಂಬಿಕೊಂಡಾಗ ಕೈ ಕೈ ಹಿಸುಕಿ ಪೆಟ್ಟಿಗೆ ಅಂಗಡಿ ಇಡುವ ಹೀನ ಸ್ಥಿತಿಗೆ ಮುವ ಹಳದಪ್ಪ ಒಂದುಕಡೆಯಾದರೆ, ತಾನು ನೆಡದ ಬೆಳೆಸದ, ಮನೆಯ ಹಿಂದಿದ್ದ ಮರವನ್ನು ರ್ಖತನದಿಂದ ಮಾರಿ, ಅದರ ಬೆಲೆ ಸರಿಯಾಗಿಲ್ಲವೆಂದು ಗೊಣಗುವ ಸೋಮಣ್ಣ, ಈ ಟ್ಟಿನಲ್ಲಿ ಹುಚ್ಚನಾಗಿ ಡಾಕ್ಟರ್ ಮನೆಯ ಕಿಟಕಿ, ಬಾಗಿಲುಗಳನ್ನು ಒಡೆದುಹಾಕುವ ಚಿತ್ರ ಇನ್ನೊಂದು ಚಿತ್ರವಾಗಿದೆ. ನೀರನ್ನು ಮಾರಿ ದುರ್ವ್ಯಸನಗಳಿಗೆ ತುತ್ತಾದ, ಆ ದುರ್ವ್ಯಸನದಿಂದಲೇ ಬದುಕನ್ನು ನೆಗಾಣಿಸಿಕೊಂಡ ವ್ಯಕ್ತಿ ನಾರಾಣಪ್ಪ ಆಗಿದ್ದಾನೆ.

ಇಲ್ಲಿ ಯಾವ ಆಸೆಗಳಿಗಾಗಿ ತಮ್ಮಲ್ಲಿದ್ದುದಕ್ಕೆ ದುಡ್ಡಿನ ಬೆಲೆಯನ್ನು ಕಟ್ಟಿ ಅದರ ಹಿಂದೆ ತಲು ತೊಡಗಿದ್ದರೋ ಆ ಮರೀಚಿಕೆಯಲ್ಲಿ ತಾವೇ ನಿರ್ನಾಮವಾಗುವುದನ್ನು ಕಾದಂಬರಿಯಲ್ಲಿ ಣುತ್ತೇವೆ. ಇದೇ ಹಳ್ಳಿಯಲ್ಲಿಯೇ, ಇಂತಹ ಜನರೊಂದಿಗೆ ಇರುವ ಇನ್ನೊಂದು ಕುಟುಂಬ ರಪ್ಪನದು. ಆತನದು ಬಹುದೂರದರ್ಶಿತ್ವದ ಕುಟುಂಬ. ಇಂತಹ ಅತಿಯಾಸೆಗೆ ುಕುವವರೆಲ್ಲರೂ ಶಾಶ್ವತ ಸುಖಿಗಳಾಗಲಾರರು. ಮಾನವ ಶ್ರಮ ಪಡದೇ ಬಂದ ಹಣ ಹಾಗೆಯೇ ಾರಟು ಹೋಗುತ್ತದೆ. ಶ್ರಮ ವಹಿಸಿ ಗಳಿಸಿದ ಹಣ ಊರ್ಜಿತವಾಗುತ್ತದೆ ಎಂದು ತಿಳಿಸಲು ರಪ್ಪನ ಕುಟುಂಬವೊಂದನ್ನು ನಿದರ್ಶನವಾಗಿ ಕೊಟ್ಟು ಆ ಮೂಲಕ ಸುಖಕ್ಕೆ ದುಃಖಕ್ಕೆ ರಣವನ್ನು ಪರೋಕ್ಷವಾಗಿ ಹೇಳಿರುವ ಕಾದಂಬರಿಕಾರರ ತಂತ್ರ ಮೆಚ್ಚಬೇಕಾದುದೇ ಆಗಿದೆ.

ಮನೆಯೊಂದನ್ನು ಕಟ್ಟುವಾಗ ಬೇಕಾಗುವ ಒಂದೊಂದೇ ಸಾಮಗ್ರಿ ಸಿಮೇಂಟ್, ನೀರು, ಣ್ಣು, ಕಲ್ಲು, ಮರ ಇತ್ಯಾದಿ ಭೌತಿಕ ವಸ್ತುಗಳನ್ನು ಒಂದೊಂದೇ ಜೋಡಿಸಿಕೊಳ್ಳುವಲ್ಲಿ ಮೇಸ್ತ್ರಿ ಲಾಯುಧನ್ ಬಿದ್ರಳ್ಳಿ ಗ್ರಾಮಕ್ಕೆ ಬಂದು ಅಲ್ಲಿನ ಭೌತಿಕ ವಸ್ತುಗಳನ್ನೆಲ್ಲವನ್ನು ಒಂದೊಂದನ್ನೇ ನ್ನದಾಗಿ ಮಾಡಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾನೆ. ಯಾರೊಬ್ಬರಿಗೂ ಸಹ ಗೊತ್ತಾಗದಂತೆ ಆ ಸ್ತುಗಳನ್ನೆಲ್ಲವನ್ನು ಸಂಗ್ರಹಿಸುವುದರ ಮೂಲಕ ಹಳ್ಳಿಯವರ ಆತ್ಮೀಯನಾಗುತ್ತಾನೆ.

ಆತ್ಮೀಯತೆಯ ಗೆರೆ ದಾಟಿದಾಗ ವೇಲಾಯುಧನ್ ಬಗ್ಗೆ ಆಕ್ರೋಶಬಂದರೂ ಊರಿನ ನ ಅವನನ್ನೇಕೆ ಬೈಯ್ಯಬೇಕು, ನಮ್ಮವರ ದುರಾಸೆಯೇ ಇಷ್ಟಕ್ಕೆಲ್ಲಾ ಕಾರಣವೆಂದು ುಮ್ಮನಾಗುತ್ತಾರೆ.

ಪ್ರಕೃತಿಯ ತಂಟೆಗೆ ಯಾರೂ ಹೋಗದಿದ್ದಾಗ, ಪರಸ್ಪರ ಕೊಡುಕೊಳ್ಳುವಿಕೆಯ ಹಾರ್ದತೆಯುತ ಸಂಬಂಧವಿರುತ್ತದೆ, ಆದರೆ ಯಾವಾಗ ಮುಗ್ಧತೆ ವ್ಯಾಪಾರೀ ಸಂಸ್ಕೃತಿಯ ಟ್ಟಕ್ಕೆ ಹೋಗುತ್ತದೆಯೋ, ಆಗ ಪ್ರಕೃತಿ ಕೆರಳಿ ಅಹಿತವನ್ನುಂಟು ಮಾಡುತ್ತದೆ ಎಂಬ ಅಂಶವು ನ್ನದ ಮೊಟ್ಟೆಯಲ್ಲಿ ನಿರೂಪಿತವಾಗಿದೆ.

## ಅಡಿ ಟಿಪ್ಪಣಿಗಳು

೧. ದ್ವೀಪ, ಪುಟ – ೪೧
೨. ನಾ. ಡಿಸೋಜ ಅಭಿನಂದನ, ಚಿರಂಜೀವಿ – ಸೊಗಸಾದ ಯೋಜಿತ ಬರವಣಿಗೆ ಕಾದಂಬರಿ ಮುಳುಗಡೆ, ಪುಟ – ೧೫೯
೩. ನಾ. ಡಿಸೋಜ ಅಭಿನಂದನ, ಸುಬ್ರಾಯ ಚೊಕ್ಕಾಡಿ, ಒಡ್ಡು ಕಾದಂಬರಿಯ ಬಗ್ಗೆ. ಪುಟ ೧೮೬.
೪. ನಾ. ಡಿಸೋಜ ಕುಂಜಾಲು ಕಣಿವೆಯ ಕೆಂಪು ಹೂವು, ಪುಟ – ೧೨೪
೫. ನಾ. ಡಿಸೋಜ ಕುಂಜಾಲು ಕಣಿವೆಯ ಕೆಂಪು ಹೂವು, ಹಿನ್ನುಡಿ
೬. ನಾ. ಡಿಸೋಜ, ವಿಷಾನಿಲ, ಪುಟ – ೫೦

## ಅಧ್ಯಾಯ-೫
## ಕಾದಂಬರಿಗಳಲ್ಲಿ ಸ್ಥಿತ್ಯಂತರಗಳು

ಸ್ಕೃತಿ

'ಒಂದು ಸಮಾಜದ ಜನತೆ ಸಮಗ್ರವಾಗಿ ಪರಿಭಾವಿಸಿದಾಗ ಕಂಡುಬರುವ ಇವರ ಕಲೆ . ನ, ನಂಬಿಕೆ, ನೀತಿ, ಕಾನೂನು, ಸಂಪ್ರದಾಯ ಹಾಗೂ ಅಲ್ಲಿನ ಮನುಷ್ಯ ತನ್ನ ಸಮಾಜದ ದಸ್ಯನಾಗಿ ಗಳಿಸಬಹುದಾದ ಅರ್ಹತೆ ಮತ್ತು ಅಭ್ಯಾಸಗಳ ಸಂಕೀರ್ಣ ಮೊತ್ತವೇ ಸಂಸ್ಕೃತಿ' ಎಂದು ಶ್ಚಾತ್ಯ ವಿದ್ವಾಂಸ ತೇಲರ್ ಅಭಿಪ್ರಾಯ ಪಡುತ್ತಾರೆ.

ಕೇಸಿಂಗ ಎಂಬ ವಿದ್ವಾಂಸರ ಪ್ರಕಾರ 'ಸಮಾಜದ ಜೀವಿಯಾಗಿ ಮನುಷ್ಯ ರಂಪರಾಗತವಾಗಿ ಹಂಚಿಕೊಳ್ಳುವ, ಕಲಿಯುವ, ಗೌರವಿಸುವ ಆಲೋಚನೆ ಕ್ರಿಯೆಗಳ ಮತ್ತು ಾನವ ನಿರ್ಮಿತ ವಸ್ತುಗಳ ಒಟ್ಟು ಮೊತ್ತವೇ ಸಂಸ್ಕೃತಿ 'ಎಂದಿದ್ದಾರೆ. ಮಾನವ ಈವರೆಗೆ ಸಾಧಿಸಿದ ಚಾರಿಕತೆಯ ಹಿಂದೆ ಈ ಸಂಸ್ಕೃತಿಯ ಅಂಶ ಅಡಗಿದೆ.

ಸಿ.ರಾಜಗೋಪಾಲಾಚಾರಿಯವರು 'ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಸಾಗಿ ುವ ಸಂಪ್ರದಾಯಗಳೇ ಸಂಸ್ಕೃತಿ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಮಾನವ ಸಮಾಜ ಮತ್ತು ಸಂಸ್ಕೃತಿಗಳಿಗೆ ಅವಿನಾಭಾವ ಸಂಬಂಧವಿದೆ. ಸಂಸ್ಕೃತಿ ಒಂದು ಮೂರ್ತ ಕಲ್ಪನೆಯಾಗಿದ್ದು, ಮನುಷ್ಯ ಸಂಸ್ಕೃತಿಯನ್ನು ಸೃಷ್ಟಿಸಿದಂತೆ ಸಂಸ್ಕೃತಿಯು ಮನುಷ್ಯನನ್ನು ಷ್ಟಿಸುತ್ತದೆ. ಮನುಷ್ಯ ಒಂದು ಸಮಾಜದ ಒಳಗಡೆ ಲೋಕರೂಢಿ, ಸಂಪ್ರದಾಯ, ಆಚರಣೆ, ೌಲ್ಯವನ್ನು ರೂಢಿಸಿಕೊಂಡಿರುತ್ತಾನೆ. ತನ್ನ ಅಗತ್ಯಕ್ಕೆ ತಕ್ಕಂತೆ ಅದನ್ನು ಮಾರ್ಪಡಿಸಿಕೊಳ್ಳುವ ಯತ್ನ ಾಡುತ್ತಾನೆ. ತಮ್ಮ ತಮ್ಮ ನಡುವೆ ಪರಸ್ಪರ ಸಹಕಾರ, ಸೌಹಾರ್ದ, ಮರುಕ ಮುಂತಾದ ಗುಣ ತ್ತು ವರ್ತನೆಗಳ ಪರಸ್ಪರ ಕೊಡುಕೊಳ್ಳುವುದು ಸಾಮಾನ್ಯ. ಈ ಬಗೆಯ ಸಂಪ್ರದಾಯ ಕಾಲಕಾಲಕ್ಕೆ ಮಾಜದಿಂದ ಸಮಾಜಕ್ಕೆ ಬದಲಾಗುತ್ತದೆ.

ಮಾನವ ರೂಢಿಸಿಕೊಂಡ ಸಂಸ್ಕೃತಿ ವಿಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಳ್ಳಬಹುದು. ಅವುಗಳೆಂದರೆ ಧಾರ್ಮಿಕ ಆಚರಣೆ, ವೇಷಭೂಷಣಗಳು, ಆಹಾರಾಭ್ಯಾಸ, ಹಬ್ಬ ಹರಿದಿನ, ಇತ್ಯಾದಿ. ಮಾನವನ ಭಾವನಾತ್ಮಕ ಹಾಗೂ ಭೌತಿಕ ಹಂತದಲ್ಲಿ ವ್ಯಕ್ತವಾಗುವ ವಿಶೇಷತೆಯನ್ನು ಸಂಸ್ಕೃತಿ ಎನ್ನಲಾಗಿದೆ. ಈ ಎಲ್ಲಾ ಸಂಸ್ಕೃತಿಗಳ ಮೂಲಾಂಶಗಳ ಅಧ್ಯಯನವನ್ನೇ ಸಾಂಸ್ಕೃತಿಕ ಅಧ್ಯಯನ ಎನ್ನಲಾಗಿದೆ.

**"ಸ್ಥಿತ್ಯಂತರಗಳು"**

ನಾ.ಡಿಸೋಜರವರ ಬಹುತೇಕ ಕಾದಂಬರಿಗಳಲ್ಲಿ ಪರಿಸರ ಪ್ರಜ್ಞೆ ಕೇಂದ್ರ ಸ್ಥಾನದಲ್ಲಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಪರಿಸರದ ಹಿನ್ನೆಲೆಯಲ್ಲಿ ರಚಿತವಾದ ದ್ವೀಪ, ಮುಳುಗಡೆ, ಒಡ್ಡು, ಕುಂಜಾಲು ಕಣಿವೆಯ ಕೆಂಪು ಹೂವು, ಒಂದು ಜಲಪಾತದ ಸುತ್ತ, ನೀರು, ಪಿಪಾಸಿಲ, ಚಿನ್ನದ ಮೊಟ್ಟೆ ಈ ಕಾದಂಬರಿಗಳ ಪ್ರಮುಖ ಆಶಯವನ್ನು ಈ ರೀತಿ ಗುರುತಿಸಬಹುದು.

1. ಎರಡು ತಲೆಮಾರುಗಳ ನಡುವಿನ ಅಂತರದಲ್ಲಿ ಪರಿಸರ, ಜೀವನ ಶೈಲಿ ಹಾಗೂ ಜನರ ಮನೋಭಾವಗಳಲ್ಲಿ ಉಂಟಾಗುವ ಸ್ಥಿತ್ಯಂತರಗಳ ಚಿತ್ರಣ ಹಾಗೂ ಅದರ ಕಾರಣಗಳ ಶೋಧನೆ.

2. ಒಂದು ಪ್ರದೇಶದಲ್ಲಿ ಒಂದು ಅಣೆಕಟ್ಟಿನ ನಿರ್ಮಾಣ ಅಥವಾ ಕಾರ್ಖಾನೆಗಳ ಸ್ಥಾಪನೆ ಇತ್ಯಾದಿಗಳಿಂದಾಗಿ ಆ ಪರಿಸರದಲ್ಲಿ ಉಂಟಾಗುವ ಸ್ಥಿತ್ಯಂತರಗಳ ಚಿತ್ರಣ.

ಪರಿಸರದಲ್ಲಿನ ಸ್ಥಿತ್ಯಂತರಗಳ ಪರಿಣಾಮಗಳೇ ಕೇಂದ್ರ ಸ್ಥಾನದಲ್ಲಿರುವ ಈ ಗುಂಪಿನ ಕಾದಂಬರಿಗಳಲ್ಲಿ ಪರಿಸರವನ್ನು ಕುರಿತ ಬೋಧನೆ ಮುಖ್ಯವಾದ ಗುರಿಯಲ್ಲ. ಇಲ್ಲಿ ಕಥೆಯೂ ಸಾಕಷ್ಟು ಪ್ರಧಾನವಾಗಿಯೇ ಇದೆ. ಇಲ್ಲಿ ಉಂಟಾಗುವ ಸ್ಥಿತ್ಯಂತರಗಳು ಇಡೀ ಸಮುದಾಯದ ನೋವು ನಲಿವುಗಳಾಗಿವೆ. ಇವೆಲ್ಲವೂ ಸಾಮಾಜಿಕ ಸಮಸ್ಯೆಯನ್ನು ಪ್ರಧಾನವಾಗಿ ಉಳ್ಳ ಕಾದಂಬರಿಗಳೇ ಆದರೂ ಒಂದು ಮುಖ್ಯ ವ್ಯತ್ಯಾಸವನ್ನು ನಾವಿಲ್ಲಿ ಗುರುತಿಸಬಹುದಾಗಿದೆ. ಪರಿಸರದಲ್ಲಾದ ಸ್ಥಿತ್ಯಂತರಗಳಿಂದ ಉದ್ಭವವಾದ ಸ್ಥಿತಿಯಿಂದ ಅದು ಮತ್ತೆ ಹಿಂದಿನ ಸ್ಥಿತಿಗೆ ಹಿಂತಿರುಗಲಾರದಂತಹ ಪರಿಸ್ಥಿತಿಯನ್ನು ನಿರ್ಮಿಸಿರುತ್ತದೆ. ಕುಂಜಾಲು ಕಣಿವೆಯ ಕೆಂಪು ಹೂವು,ಒಂದು ಜಲಪಾತದ ಸುತ್ತ, ಕಾದಂಬರಿಗಳ ಪರಿಸ್ಥಿತಿ ಈ ರೀತಿಯದು. ಅದರ ಮತ್ತೊಂದು

ವರ್ಗಕ್ಕೆ ಸೇರಿದ ಕಾದಂಬರಿಗಳಲ್ಲಿ ಪರಿಸರದ ಕಲುಷಿತತೆ ಅನಿವಾರ್ಯ ಅಂಶವಾಗಿರುವುದಿಲ್ಲ. ಹಾಗೊಮ್ಮೆ ಇದ್ದರೂ ಹಿಂದಿನ ಸ್ಥಿತಿಗೆ ಮರಳುವುದು ಇಲ್ಲಿ ಸಾಧ್ಯವಿರುತ್ತದೆ.

ಸಂಪೂರ್ಣ ಪರಿಸರದ ಹಿನ್ನೆಲೆಯಲ್ಲಿ ರಚಿತವಾದ ಮುಳುಗಡೆ, ಕುಂಜಾಲು ಕಣಿವೆಯ ಕೆಂಪು ಹೂವು, ಕಾದಂಬರಿಗಳಲ್ಲಿ ಎರಡು ತಲೆಮಾರುಗಳ ನಡುವಿನ ಅಂತರದಲ್ಲಿ ಪರಿಸರದಲ್ಲಿ ಉಂಟಾದ ಸ್ಥಿತ್ಯಂತರವನ್ನು ಗುರುತಿಸಬಹುದಾದರೆ, 'ದ್ವೀಪ', 'ಒಡ್ಡು', 'ಒಂದು ಜಲಪಾತದ ಸುತ್ತ' ಕಾದಂಬರಿಗಳಲ್ಲಿ ಒಂದು ತಲೆಮಾರಿನ ಸಂದರ್ಭದಲ್ಲೇ ಸ್ಥಿತ್ಯಂತರಗಳನ್ನು ಗುರುತಿಸಬಹುದು. ಕೆಂಪು ಹೂವು ಪ್ರೀತಿಗೆ, ಸಂಸ್ಕೃತಿಗೆ, ಪರಂಪರೆಗೆ ಸಂಕೇತವಾದರೆ, ಜಲಪಾತ ಒಂದು ಬದುಕಿನ ಉತ್ಸಾಹಕ್ಕೆ ಪ್ರಕೃತಿ ನೀಡುವ ಚೈತನ್ಯಕ್ಕೆ ಸಾಕ್ಷಿಯಾಗಿದೆ. ಕೆಂಪು ಹೂವನ್ನು ಕಾಡದಿದ್ದ ಅನಂತನಿಗೆ ಜೀವನದಲ್ಲಿ ಅಮೂಲ್ಯವಾದುದನ್ನು ಕಳೆದುಕೊಂಡುದಷ್ಟೇ ಅನುಭವವಾದರೆ, ಜಲಪಾತವನ್ನು ಚಿತ್ರಿಸುವ ಯೋಜನೆ ಎಂದರೆ ಬದುಕಿನ ಚೈತನ್ಯವನ್ನೇ ಚಿತ್ರಿಸುವ ಜೀವ ವಿರೋಧಿ ಕ್ರಿಯೆಯಾಗಿದೆ.

ನೀರು, ವಿಷಾನಿಲ ಹಾಗೂ ಚಿನ್ನದ ಮೊಟ್ಟೆ ಕಾದಂಬರಿಗಳಲ್ಲಿ ಕಾರ್ಖಾನೆ ಸ್ಥಾಪನೆಯಿಂದಾಗಿ ಹಾಗೂ ಹಣದ ಪ್ರವೇಶದಿಂದ ಆ ಪ್ರದೇಶದಲ್ಲಿ ಉಂಟಾದ ಸಾಮಾಜಿಕ, ಧಾರ್ಮಿಕ, ಆರ್ಥಿಕ ಜೀವನದ ಮೇಲೆ ಬೀರಿದ ಪ್ರಭಾವ ಇದರಿಂದಾಗಿ ಆದ ಪರಿಣಾಮವನ್ನು ಚಿತ್ರಿಸುತ್ತಾ ಹೋಗುತ್ತದೆ. ಇವುಗಳಿಗೆ ಕಾರಣ ಹಾಗೂ ಪರಿಣಾಮಗಳ ಶೋಧನೆ ಇವರ ಕಾದಂಬರಿಗಳ ಉದ್ದಕ್ಕೂ ಇರುವುದನ್ನು ಗುರುತಿಸಬಹುದಾಗಿದೆ. ಇವುಗಳ ಸಂಕ್ಷಿಪ್ತ ಅಧ್ಯಯನವನ್ನು ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

**"ಸಾಮಾಜಿಕ ಸ್ಥಿತ್ಯಂತರಗಳು"**

ಸಾಮಾಜಿಕವಾಗಿಯಾಗಲಿ ಸಾಂಸ್ಕೃತಿಕಗಿಯಾಗಲಿ ಬದಲಾವಣೆ ಎಂಬುದು ಸಾಮಾನ್ಯ. ಅದು ಸರ್ವವ್ಯಾಪಿಯಾದುದು, ಸಂಸ್ಕೃತಿಯಲ್ಲಿ ಸಾಮಾಜಿಕ ಸಂಸ್ಕೃತಿ ಎಂಬುದು ಒಂದು ಘಟ್ಟ. ಅವುಗಳಲ್ಲಿ ಹಲವು ಸಮಾಜಗಳು, ಅದರೊಳಗಿನ ಜಾತಿ, ವರ್ಗ, ಕುಟುಂಬ, ಬದುಕು, ಸಂಬಂಧಗಳು, ವರ್ಣವ್ಯವಸ್ಥೆ ಸೇರಿರುತ್ತದೆ.ಈ ಅಂಶಗಳಲ್ಲಿ ಬದಲಾವಣೆಗಳುಂಟಾದರೆ ಅದನ್ನು ಸಾಮಾಜಿಕ ಸ್ಥಿತ್ಯಂತರಗಳೆನ್ನುತ್ತಾರೆ. ಸಮಾಜದಲ್ಲಿ ಮಾನವರಿಗೆ ಅರಿವಿಲ್ಲದಂತೆಯೇ ಸ್ಥಿತ್ಯಂತರಗಳು

ಆಗುತ್ತಲೇ ಇರುತ್ತವೆ.ಈ ಸ್ಥಿತ್ಯಂತರ ಸಮಾಜಕ್ಕೆ ಅನಿವಾರ್ಯವಾಗಿದ್ದರೂ ಎಲ್ಲಾ ಬದಲಾವಣೆಗಳ ಪ್ರಗತಿಗೆ ಪೂರಕವಾಗಿರುವುದಿಲ್ಲ. ಕೆಲವೊಮ್ಮೆ ಅನುಕೂಲವಾಗಿಯೂ, ಮತ್ತೊಮ್ಮೆ ಅನಾನುಕೂಲವಾಗಿಯೂ ಪರಿಣಮಿಸಬಹುದು.

'ದ್ವೀಪ' ಕಾದಂಬರಿಯಲ್ಲಿ ಮನುಷ್ಯ ಸಂಬಂಧಗಳ ಬೆಲೆ ಕಳೆದುಹೋಗುತ್ತದೆ. ಪರಿಹಾರ ಸಿಗದ ಗಣಪಯ್ಯ ಮೊದಲು ತನ್ನ ಸಮಾಜದೊಂದಿಗೆ ಸಂಬಂಧವನ್ನು ಹೇಗೆ ಇಟ್ಟುಕೊಂಡಿದ್ದ ಹಾಗೆಯೇ ಸಮಸ್ಯೆ ಅಧಿಕವಾದಂತೆ, ಸರ್ಕಾರ, ಸ್ಥಿರಾಸ್ತಿ,ಚರಾಸ್ತಿಗಳ ಲೆಕ್ಕದಲ್ಲಿ ಅಳೆಯತೊಡಗಿದಾಗ ಮನುಷ್ಯ ಆಕ್ಷಣದವರೆಗೆ ಆ ಸಮಾಜದೊಡನೆ ಬೆಳೆಸಿಕೊಂಡು ಬಂದಿದ್ದ ತತ್ಸಂಬಂಧಗಳು, ನಂಬಿಕೆ, ವಿಶ್ವಾಸಗಳು ಎಲ್ಲವೂ ವಿರುದ್ಧವಾಗುತ್ತವೆ, ಆಗ ಮನುಷ್ಯನ ಮಧುರ ಸಂಬಂಧಕ್ಕೆ ಬೆಲೆಯೇ ಇಲ್ಲದಂತಾಗುತ್ತದೆ. ಒಂದು ಸಮಾಜದ ಒಳಗೆ ನಿಂತು ಅನುಭವಿಸುವ ಪ್ರಕ್ರಿಯೆ ಬೇರೆ, ಹಾಗೆಯೇ ಸಮಾಜದ ಹೊರಗೆ ನಿಂತು ವೀಕ್ಷಿಸಿದಾಗ ಕಂಡು ಬರುವ ಅಂಶವೇ ಬೇರೆಯಾಗಿರುತ್ತದೆ.

"ಗಣಪಯ್ಯನ ಸಂಸಾರದ ಅನ್ಯಾಯ ಸಮಾಜದ ಚಿಕ್ಕ ಘಟಕ ಕುಟುಂಬದ ನೆಲರಯಲ್ಲಾದದ್ದು, ವಸಾಹತುಶಾಹಿ ಅನುಭವ ನಮ್ಮಲ್ಲಿ ಹುಟ್ಟುಹಾಕಿದ್ದ ಕೀಳರಿಮೆಯು ಇಂತಹದ್ದೇ ಆಗಿದೆ. ? ನಮ್ಮ ಸಮಾಜದ ಚೌಕಟ್ಟಿನೊಳಗೆ ನಮ್ಮ ನಡವಳಿಕೆಯನ್ನು ನಮ್ಮ ಕ್ರಿಯಾಶೀಲತೆಯನ್ನು ಮುಟ್ಟಿ ನೋಡಿಕೊಳ್ಳದ ನಾವು ಸದಾ ಹೊರಗಿನಿಂದ ಬರುವ ಗುಣ ನಿರ್ಧಾರದ ಮಾತುಗಳಿಗಾಗಿ ಕಾಯುವುದು ಇದಕ್ಕೆ ತತ್ಸಮವಾದುದಲ್ಲವೇ?

ಮುಳುಗಡೆ ಕಾದಂಬರಿಯಲ್ಲಿ ಮುಳುಗಡೆ ಎನ್ನುವುದು ಸಾಮಾಜಿಕವಾಗಿ ಹಲವು ಪರಿವರ್ತನೆ ಮಾಡಿತು. ಒಡತೆರಿ ಧನಪಾಲಯ್ಯ ತನ್ನ ಅಣ್ಣತಮ್ಮಂದಿರೊಂದಿಗೆ ಅನ್ಯೂನ್ಯವಾಗಿ ಬದುಕಬೇಕೆಂದು ಅಂದುಕೊಂಡರೆ ಆ ಕುಟುಂಬ ವಿಘಟನೆಯಾಗುತ್ತದೆ. ಹೀಗೆ ಅವಿಭಕ್ತ ಕುಟುಂಬಗಳೆಲ್ಲ ವಿಭಕ್ತ ಕುಟುಂಬವಾಗುವ ಪರಿಸ್ಥಿತಿ ಈ ಕಾದಂಬರಿಯಲ್ಲಿದೆ.

ಕಾದಂಬರಿಯ ನಾಯಕ ಸಂಶೋಧಕನಾಗಿ ಸೇವೆ ಸಲ್ಲಿಸುತ್ತಿದ್ದಾಗ ಆ ಪ್ರದೇಶದಲ್ಲಿ ಸಾಮಾಜಿಕವಾಗಿ ಹಲವಾರು ಬದಲಾವಣೆಯಲ್ಲಾದ ಅನುಭವವನ್ನು ನೋಡುತ್ತಾನೆ.

"ತಲೆಮಾರುಗಳಿಂದ ಬದುಕಿ ಬಾಳಿದ ಕುಟುಂಬಗಳು, ದೊಡ್ಡ ಮನೆಗಳು ಮುಳುಗಡೆಯಾಗಿ ಹೋಗುತ್ತಿವೆ ಎನ್ನುವುದು ಅವನಿಗೆ ಮೊಟ್ಟ ಮೊದಲು ಭೇಟಿಯಾದ ಒಡತೆರಿ ಪಟೇಲ ಧನಪಾಲಯ್ಯನನ್ನು ನೋಡಿ ಮಾತಾನಾಡಿದಾಗ ಅರ್ಥವಾಗುತ್ತದೆ." ಎಲ್ಲಾ ಮುಂಡಮೋಚಿದ ಮೇಲೆ ಇತಿಹಾಸ ತಕೊಂಡೇನು ಮಾಡೋದು ಎಂದು ಪಟೇಲ ನೋವಿನಿಂದ ಹೇಳಿದಾಗ ಅವನ ಒಡತೆರಿ ಅರಮನೆಯನ್ನು ಕಂಡಾಗ ಅದರ ವೈಭವದ ಉದ್ದಗಲಗಳನ್ನು ನೋಡಿದಾಗ, ಮುಳುಗಡೆಯಿಂದ ಈ ಮನೆ ಮಾತ್ರವಲ್ಲ ಈ ಮನೆಯ ಬಾಂಧವ್ಯ-ಒಗ್ಗಟ್ಟು ಮುಳುಗಿ ಹೋಗಿದೆ ಎಂದು ತಿಳಿಯುತ್ತದೆ." [2]

'ಒಡ್ಡು' ಕಾದಂಬರಿಯಲ್ಲಿ ಹನುಮಂತಪ್ಪನ ಬದುಕು ಛಿದ್ರವಾಗುತ್ತದೆ. ಭೂಮಿಯ ಜೊತೆಗಿನ ಮನುಷ್ಯ ಸಂಬಂಧವೂ ಅತ್ಯಂತ ಭಾವನಾತ್ಮಕವಾಗಿರುತ್ತದೆ.ಆದರೆ ಅಭಿವೃದ್ಧಿಯ ಹೆಸರಿನಲ್ಲಿ ಸರ್ಕಾರ ಹಾಕಿಕೊಳ್ಳುವ ಯೋಜನೆಗಳು ಯಾಂತ್ರಿಕವಾಗಿವೆ, ಆದ್ದರಿಂದಲೇ ಹನುಮಂತಪ್ಪ ಹಾಗೂ ಅವನಂತಹ ಮುಗ್ಧ ರೈತರ ಭಾವನೆಗಳಿಗೆ ಏನೇನೂ ಬೆಲೆ ಕೊಡದ ಸರ್ಕಾರವು ಕಾನೂನಿನಲ್ಲೇ ಕಣ್ಣು ನೆಟ್ಟು, ಅತ್ಯಂತ ನಿರ್ದಯವಾಗಿ ಅವನೊಂದಿಗೆ ವರ್ತಿಸುತ್ತದೆ.

ಆಧುನಿಕತೆಗೆ ತನ್ನನ್ನು ಮುಖಾಮುಖಿಯಾಗಿಸಿಕೊಂಡಾಗ ತನ್ನನ್ನೇ ತಾನು ಬದಲಿಸಿಕೊಳ್ಳುವುದು ಕಂಡು ಬರುತ್ತದೆ. ಹನುಮಂತಪ್ಪನ ತಲೆಮಾರಿನ ಸಾಮಾಜಿಕ ಸ್ಥಿತಿಗತಿ ಅವನ ಮಗನ ತಲೆಮಾರಿಗೆ ಇರುವುದಿಲ್ಲ. ತಂದೆ, ಮಕ್ಕಳ ಮನೋಭಾವವೇ ಬೇರೆಯಾಗಿದೆ. ಅದಕ್ಕೆ ತಕ್ಕಂತೆ ಹಿಂದಿನ ತಲೆಮಾರಿನವರು ತಮ್ಮ ನಡವಳಿಕೆಯನ್ನು ಬದಲು ಮಾಡಿಕೊಂಡಿರುತ್ತಾರೆ. ತಂದೆಯ ಅನುಭವ ಮಕ್ಕಳಿಗಾಗಿರುವುದಿಲ್ಲ. ಅವರು ಶೋಕಿ ಬದುಕಿಗೆ ಮಾರು ಹೋಗಿ ತಂದೆ ಕಷ್ಟಪಟ್ಟು ಸಾಕಿದ್ದೂ ಸೇರಿದಂತೆ ಎಲ್ಲವನ್ನು ಮರೆಯುವ ಸ್ಥಿತಿಗೆ ಬರುತ್ತಾರೆ. ಈ ರೀತಿಯಾಗಿ ಮನುಷ್ಯನ ಸಣ್ಣತನಗಳು, ಅಮಾನವೀಯ ವರ್ತನೆಗಳು ಸಮಾಜದಲ್ಲಿ ಕೆಲಸ ಮಾಡಿದಾಗ, ನೆಮ್ಮದಿಯ ಬದುಕು ಏರುಪೇರಾಗುತ್ತದೆ. ಮತ್ತು ಕುಟುಂಬ ಬೇರ್ಪಡುತ್ತದೆ. ಸಾಮಾಜಿಕ ಬಂಧನದ ಕೊಂಡಿ ಕಳಚಿ ಬದಲಾವಣೆಗಳುಂಟಾಗುತ್ತದೆ.

ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಸ್ಥಿತ್ಯಂತರಗಳಲ್ಲಿ ಹಿಂದಿನ ಕಾಲದ ಅಂಶಗಳೊಂದಿಗೆ, ಹೊಸಕಾಲದ ಸಂಗತಿಗಳೂ ಸೇರಿಕೊಂಡಿರುತ್ತವೆ. ತಲೆಮಾರಿನಿಂದ ತಲೆಮಾರಿಗೆ

ಜನರ ಬದುಕು, ಭಾವನೆಗಳಲ್ಲಿನ ಭಿನ್ನತೆಯನ್ನು 'ಕುಂಜಾಲು ಕಣಿವೆಯ ಕೆಂಪು ಹೂವು' ಕಾದಂಬರಿಯಲ್ಲಿ ಸ್ಪಷ್ಟವಾಗಿ ಕಾಣಬಹುದು. ಕಾದಂಬರಿಕಾರರ ನಿರೂಪಣಾ ವಿಧಾನವೇ ಸ್ಥಿತ್ಯಂತರಗಳನ್ನು ಗುರುತಿಸುತ್ತಾ ಹೋಗುವುದಾಗಿದೆ. ತಂದೆ ಹಾಗೂ ಮಗ ಇಬ್ಬರೂ ನಿಸರ್ಗದ ಆಕರ್ಷಣೆಗೆ ಒಳಗಾಗಿದ್ದರೂ, ಅವರ ಮನೋಭಾವಗಳು ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ತಂದೆ ರಾಮರಾಯರು ಪ್ರಕೃತಿಯ ಸಹಜ ಸೌಂದರ್ಯಕ್ಕೆ ಮರುಳಾಗಿ, ಹತ್ತು ವರ್ಷಕ್ಕೊಮ್ಮೆ ಅರಳುವ ಕೆಂಪು ಹೂವನ್ನು ನೋಡಲು ಹೋದರೆ, ಮಗ ಅನಂತ ದೈನಂದಿನ ನಾಗರಿಕ ಜಗತ್ತಿನ ಜಂಜಡಗಳಿಂದ ಬೇಸತ್ತು, ಬದಲಾವಣೆಗಾಗಿ ಆ ಹೂವನ್ನು ನೋಡಲು ಹೋಗುತ್ತಾನೆ. ಇಬ್ಬರೂ ಕೈಗೊಂಡ ಪ್ರಯಾಣ ಒಂದೇ ಆದರೂ ಅವರು ಹೊರಟ ರೀತಿ ಮಾತ್ರ ಭಿನ್ನವಾಗಿದೆ.

"ಸೊಂಟಕ್ಕೆ ಕತ್ತಿ, ಕೈಯಲ್ಲಿ ದೊಣ್ಣೆ, ಹೆಗಲಿಗೆ ಕಂಬಳಿಯಲ್ಲಿ ಬಿಗಿದ ಗಂಟು, ಅದರಲ್ಲಿ ಒಂದು ಜೊತೆ ಪಂಚೆ, ಲುಂಗಿ, ನೀರಿನ ಕುಪ್ಪಿ, ಅಕ್ಕಿ ಮೆಣಸಿನಕಾಯಿ, ಬೆಂಕಿ ಪೊಟ್ಟಣ ಮತ್ತಿತರ ವಸ್ತುಗಳು ಒಂದೆರಡು ಪಾತ್ರೆಗಳು, ಲೋಟ, ಕಾಲಿಗೆ ಮೆಟ್ಟು, ತಲೆಗೆ ಕಂಬಳಿ ದಗಲೆ"[೩] ಇದು ತಂದೆ ರಾಮರಾಯರು ಕೈಗಂಡ ಪ್ರವಾಸವಾದರೆ, ಮಗನದೇ ಸಂಪೂರ್ಣ ಭಿನ್ನ.

ಐವತ್ತು ವರ್ಷಗಳ ಹಿಂದೆ ತಂದೆ ನೋಡಿ ಬಂದಿದ್ದ ಹತ್ತು ವರ್ಷಗಳಿಗೊಮ್ಮೆ ಅರಳುವ ಹೂವು ಅದೇ ವರ್ಷ, ಅದೇ ತಿಂಗಳು  ಬಿಡುವುದೆಂದು, ತಂದೆಯ ದಿನಚರಿಯ ಮೇರೆಗೆ ಲೆಕ್ಕ ಹಾಕಿದ ಅನಂತ ಅಂತಹ ಅನುಪಮ, ಅಮೂಲ್ಯವಾದ ಹೂವನ್ನು ನೋಡಬೇಕೆಂದು ಬಯಸುತ್ತಾನೆ. ಅಷ್ಟೇ ಅಲ್ಲದೆ ತನ್ನ ತಂದೆ ತನ್ನ ಅನುಭವಗಳನ್ನು ಕೇವಲ ಶಬ್ಧಗಳ ಮೂಲಕ ಮಾತ್ರ ದಾಖಲಿಸಲು ಸಾಧ್ಯವಾಯಿತೆಂದು, ತನಗೆ ಅದಕ್ಕಿಂತಲೂ ಹೆಚ್ಚಿನ ಸೌಲಭ್ಯಗಳಿದ್ದು, ಕ್ಯಾಮರಾ ಮೂಲಕ ಆ ಚೆಲುವನ್ನು ಸೆರೆ ಹಿಡಿದು ತರಬಲ್ಲನೆಂದು ಯೋಚಿಸುತ್ತಾನೆ. ಸಣ್ಣದೊಂದು ಗಂಟನ್ನು ಬೆನ್ನಿಗೆ ಹಾಕಿಕೊಂಡು, ಕೈಯಲ್ಲಿ ನೀರಿನ ಬಾಟಲಿ ಹಿಡಿದುಕೊಂಡು ಹೊರಡುತ್ತಾನೆ.

ದಾರಿಯಲ್ಲಿ ತಂದೆ ರಾಮರಾಯರು ಪ್ರಕೃತಿ ಸೌಂದರ್ಯದ ಸವಿಯನ್ನು ಸಂಪೂರ್ಣ ಸವಿಯುತ್ತಾ ಮುನ್ನಡೆಯುತ್ತಾರೆ. "ರಸ್ತೆ ಬದಿಗೆ ಕುಳಿತ ಮೊಲಗಳು ಇವರನ್ನು ನೋಡಿ ಪುಟಿಯುವ ಉಣ್ಣೆಯ ಚೆಂಡಿನ ಹಾಗೆ ಪುಟಿದು ಮರೆಯಾದವು. ಒಂದೆಡೆಯಲ್ಲಂತೂ ನವಿಲುಗಳ ಪರಿಸೆಯೇ

ನೆರೆದಿತ್ತು. ರಾಮರಾಯರು ಅವಕ್ಕಾಗಿ ನಿಂತರು. ಸುತ್ತ ಬೇವಿನ, ಬೇಲದ ಮರಗಳು. ಈ ಮರಗಳ ಮೇಲೆ ಹಾರುವ ನವಿಲುಗಳ ಹಿಂಡು, ನೆಲದ ಮೇಲೂ ಪರಸ್ಪರ ಅಟ್ಟಿಸಿಕೊಂಡು ಹೋಗುವ . ಕುಕ್ಕಿ ಚೀರುವ, ಒಂಟಿಯಾಗಿ ನಿಂತು ಕೇಕೆ ಹಾಕುವ ನವಿಲುಗಳು. ಒಂದೆರಡು ಗರಿ ಕೆದರಿಕೊಂಡು ನಿಂತಿದ್ದವು. ಅವುಗಳು ಮೈ ಒದರಿದಾಗ ಗರಿಗಳ ಚಾಮರ ಥರಗುಟ್ಟಿ ಕಂಪಿಸಿ ಅದೊಂದು ಬಗೆಯ ಸದ್ದು ಕೇಳಿಸುತ್ತಿತ್ತು. ನವಿಲುಗಳ ನಾಟ್ಯ, ನುಣುಪು ಮೈ, ಮಿಂಚು ಕಣ್ಣು, ಅವುಗಳ ಸ್ವಚ್ಛಂದ ವಿಹಾರ ಕೇಕೆ, ಕುಣಿತ ಮಣಿತ ನಡೆಯುವ ಬಿಂಕ ಭಾವಗಳನ್ನೆಲ್ಲಾ ಮೈ ಮರೆತು ಕುಳಿತು ನೋಡಿದರು."[1] ಇದು ತಂದೆ ಕಂಡ ದೃಶ್ಯವಾದರೆ ಅನಂತ ಕಂಡ ದೃಶ್ಯವೇ ಬೇರೆಯಾಗಿತ್ತು.

ದಾರಿಯಲ್ಲಿ ಮೊಲಗಳ ಭೇಟಿಯಾಗಲ್ಲಿಲ್ಲ, ಕೆಲಗ್ರಾಮಗಳಲ್ಲಿ ಗ್ರಾಮಸಿಂಹಗಳಷ್ಟೇ ನೆಲ ಮೂಸುತ್ತಾ ಹಾದು ಹೋದವು. ನವಿಲುಗುಂದಕ್ಕೆ ಬಂದಾಗ ಅದು ಹೆಸರಿಗೆ ಮಾತ್ರ ನವಿಲುಗುಂದವಾಗಿತ್ತು ಅಲ್ಲಿ ನವಿಲುಗಳ ಗದ್ದಲವೂ ಇಲ್ಲ, ಸುಳಿವೂ ಇರಲಿಲ್ಲ. ತಂದೆಯ ದಿನಚರಿಯಲ್ಲಿ ನವಿಲುಗಳ ಮೆರವಣಿಗೆಯ ಭವ್ಯತೆಯನ್ನು ಬಣ್ಣಿಸಿದ್ದನ್ನು ಓದಿದ್ದ ಅನಂತನಿಗೆ ನಿರಾಸೆಯೊಂದಿಗೆ ನವಿಲುಗಳ ಸಂತತಿಯು ವಿನಾಶದ ಅಂಚನ್ನು ತಲುಪಿದ್ದು ಕುರಿತು ದುಃಖವೆನಿಸುತ್ತದೆ. ಇದು ರಾಷ್ಟ್ರಪಕ್ಷಿಗೆ ಒದಗಿದ ದುರಂತವಾಗಿದೆ.

ರಾಮರಾಯರ ಸ್ನೇಹಿತರಾದ ಬೆಳುಮಾಯಿ ಗೋವಿಂದರಾಯರು ಉನ್ನತ ವಿಚಾರಗಳನ್ನು ಹೊಂದಿದವರು. ಅವರ ವ್ಯಕ್ತಿತ್ವವನ್ನು, ಅವರ ಅಭಿರುಚಿಯನ್ನು ತಿಳಿಯಬೇಕಾದರೆ ಅವರ ತೋಟದ ಬಗ್ಗೆ ತಿಳಿಯಲೇಬೇಕು. ದೊಡ್ಡ ತೋಟ, ಸಾವಿರ ಅಡಿಕೆ ಮರಗಳು, ಏಲಕ್ಕಿ, ಮೆಣಸು, ವೀಳ್ಯೆದೆಲೆ. ಇಂದು ಅಂಚಿನಲ್ಲಿ ಭಾರಿ ಮನೆ, ಬೆಳುಮಾಯಿ ಮನೆ ಎಂದೇ ಅದಕ್ಕೆ ಹೆಸರಾಗಿತ್ತು. ಆಗಿನ ಕಾಲದಲ್ಲಿಯೇ ಉನ್ನತ ಕೃಷಿ ಮಾಡಿ ಪ್ರಸಿದ್ಧರಾಗಿರುತ್ತಾರೆ. ಮುಂಬಯಿಂದ ಗಾಜಿನ ದೀಪಗಳನ್ನು ಲೋಹದ ವಿಗ್ರಹಗಳನ್ನು ತರಿಸಿ ಭವ್ಯವಾದ ಬಂಗಲೆಯನ್ನು ಕಟ್ಟಿಸಿ, ಸುತ್ತಲಿನ ಜನರೆಲ್ಲಾ ಆ ಬಂಗಲೆ ನೋಡುವುದಕ್ಕೆಂತಲೇ ಬರುವಂತೆ ಮಾಡಿದ್ದರು. ಗುಡ್ಡದ ಮೇಲೆ ಹಳ್ಳ ಹರಿದು ಬಂದು ತುಂಬಿಕೊಳ್ಳುವಲ್ಲಿಗೆ ಒಂದು ತೊಟ್ಟಿ ನಿರ್ಮಿಸಿ, ಆ ನೀರಿನಿಂದ ಮನೆಯ ಮುಂದೆ ಸದಾ ಚಿಮ್ಮಿ ಪುಟಿಯುತ್ತಿದ್ದ ಕಾರಂಜಿಯನ್ನು ನಿರ್ಮಿಸಿದ್ದರು. ಇದು ರಾಮರಾಯರ ಕಾಲದಲ್ಲಿದ್ದ ಗೋವಿಂದರಾಯರ ಬಂಗಲೆಯ ಸೊಬಗು.

ಅನಂತ ಬೆಳುಮಾಯಿಗೆ ಬಂದಾಗ ಅಲ್ಲಿ ನಾಗರಿಕ ಸೌಲಭ್ಯಗಳೆಲ್ಲಾ ಬಂದಿದ್ದು, ಬಂಗಲೆ ನೋಡಲು ಹೋದಾಗ ಒಂದು ಹಾಳು ಬಿದ್ದ ತೋಟ, ನಡುವೆ ಅಷ್ಟೇ ಹಾಳಾಗಿ ಹೋದ ಒಂದು ಕಟ್ಟಡ, ಸುಣ್ಣ ಬಣ್ಣ ಕಾಣದೆ ಎಷ್ಟೋ ವರ್ಷಗಳಾಗಿದ್ದವು. ಗೋಡೆ ಅಲ್ಲಲ್ಲಿ ಕುಸಿದಿದ್ದು, ತೋಟ ಕಾಡಾಗಿತ್ತು. ಕಂಚಿನ ಪ್ರತಿಮೆಗಳ ಮೇಲೆ ಪಾಚಿ, ಕಾರಂಜಿ ತೊಟ್ಟಿಯಲ್ಲಿ ಎಲೆ, ಕಸ ಕಡ್ಡಿಗಳ ರಾಶಿ ಇರುವುದನ್ನು ಕಾಣುತ್ತಾನೆ. ನಗರದಲ್ಲಿ ಕಲಿಯಲು ಹೋದ ಗೋವಿಂದರಾಯರ ಮಗ ಕುದುರೆ, ಜೂಜು, ಕುಡಿಯುವುದನ್ನು ಕಲಿತು, ರಾಯರು ತೀರಿಹೋದ ಮೇಲೆ ಸಿನಿಮಾ ತೆಗೆಯಲು ಹೋಗಿ ಇಲ್ಲಿಯ ತೋಟ, ಪ್ರಕೃತಿ, ಬಂಗಲೆ ಎಲ್ಲವನ್ನೂ ಕಳೆದುಕೊಂಡಿರುತ್ತಾನೆ. ಬಹುಶಃ ಗೋವಿಂದರಾಯರಿಗೆ ಎಲ್ಲಿಗೆ ಹೇಗೆ ಹೋಗಬೇಕೆಂಬ ಅರಿವಿತ್ತು. ಆದರೆ ಮಗನಿಗೆ ಆ ಅರಿವು ಇಲ್ಲದೆ ಹೋದದ್ದರಿಂದ ಹೀಗಾಯಿತು ಎಂದು ಆ ಮನೆಯ ಆಳು ಹೇಳುವ ಮಾತು ಸತ್ಯಕ್ಕೆ ಹತ್ತಿರವಾದ ಮಾತಾಗಿದೆ. ಜೊತೆಗೆ ಆಧುನಿಕತೆಯ ಹೆಸರಿನಲ್ಲಿ ನಾವೇನು ಕಳೆದುಕೊಳ್ಳುತ್ತಿದ್ದೇವೆ ಎನ್ನುವುದರ ಅರಿವಿಲ್ಲದ ಗೋವಿಂದರಾಯರ ಮಗ ಎಲ್ಲವನ್ನೂ ನಾಶಪಡಿಸಿರುತ್ತಾನೆ.

ಕೋಟೆ ಮುಂದ್ರಾಡಿ ಹಿಂದೆ ಅದೊಂದು ಉಪರಾಜಧಾನಿಯಾಗಿತ್ತೆಂಬುದು ಸ್ಥಳ ಐತಿಹ್ಯ. ಊರಸುತ್ತ ಕೋಟೆ, ಊರು ಗುಡ್ಡದ ಮೇಲಿದ್ದು, ಗುಡ್ಡದ ಸುತ್ತ ಗೋಡೆ ಇದೆ. ಹಳೆಯದಾದ ಲಕ್ಷ್ಮೀನಾರಾಯಣ ದೇವರ ಗುಡಿಯಿದ್ದು, ವಿಜಯನಗರದ ಅರಸರ ಕಾಲದ ಶಿಲ್ಪ, ಕಂಬಗಳು ಗೋಪುರ ಎಲ್ಲವೂ ಕಲ್ಲಿನದಾಗಿದ್ದವು. ಒಳಗಿನ ವಿಗ್ರಹವು ಸುಂದರವಾಗಿತ್ತು.

ಅನಂತ ಮುಂದ್ರಾಡಿಯನ್ನು ಪ್ರವೇಶಿಸಿದಾಗ, ಊರು ದೊಡ್ಡದಾಗಿದ್ದು, ಆಧುನಿಕ ಸೌಲಭ್ಯಗಳೆಲ್ಲವೂ ಅಲ್ಲಿ ಕಾಲಿಟ್ಟಿರುತ್ತದೆ. ಆದರೆ ಲಕ್ಷ್ಮೀ ನಾರಾಯಣ ಗುಡಿಪಾಳು ಬಿದ್ದಿರುತ್ತದೆ. ಮೆಟ್ಟಿಲುಗಳು ಕುಸಿದು,ಮೇಲೆ ಹೋಗಲು ದಾರಿಯೇ ಇರುವುದಿಲ್ಲ. ಗೋಪುರದ ಮೇಲೆ ಅರಳೀಮರ, ಅಂಗಳದಲ್ಲಿ ಎಕ್ಕದ ಗಿಡ, ಧೂಪದ ಮರ ಬೆಳೆದಿರುತ್ತದೆ. ಕೋಟೆಯ ಅರ್ಧಭಾಗ ಮಾಯವಾಗಿರುತ್ತದೆ. ಮನೆಗೋಡೆಗಳಿಗೆ,ಚರಂಡಿ ಮೇಲಿನ ಹಾಸುಗಲ್ಲಿಗೆ, ಬಟ್ಟೆ ಒಗೆಯಲು. ಕಕ್ಕಸುಗಳಿಗೆ ಎಲ್ಲಕ್ಕೂ ಕೋಟೆಯ ಕಲ್ಲುಗಳನ್ನೇ ಬಳಸಿಕೊಂಡಿದ್ದು, ಇನ್ನು ಕೋಟೆ ಗೋಡೆ ಮುಗಿದ ಮೇಲೆ ದೇವಸ್ಥಾನಕ್ಕೆ ಕೈ ಹಚ್ಚುತ್ತಾರೆಂದು ಅನಂತ ಭಾವಿಸುತ್ತಾನೆ. ಮಾನವನ ಸ್ವಾರ್ಥ ಲಾಲಸೆಗಳಿಗೆ,

ಕೊನೆ ಇಲ್ಲದೆ ಇರುವ ದುರಾಸೆಗಳಿಗೆ ಪುರಾತನ ಸ್ಮಾರಕಗಳು ಹೇಗೆ ಬಲಿಯಾಗುತ್ತಿವೆ. ಎಂಬುದನ್ನು ಇಲ್ಲಿ ತಿಳಿಯಬಹುದಾಗಿದೆ.



ದಾರಿಯಲ್ಲಿ ರಾಮರಾಯರು ಕಾಲುಗಳನ್ನು ಊರಿ, ಹಿಂದಿನವುಗಳನ್ನು ಮಡಚಿಕೊಂಡು, ಬಾಲ ಬಡಿಯುತ್ತಾ, ಆಕಳಿಸುತ್ತಾ, ಮೀಸೆ ಆಡಿಸುತ್ತ ಕುಳಿತ್ತಿದ್ದ, ಕೆಂಪು ಹಳದಿ ಪಟ್ಟೆ, ಬೆಂಕಿ ಉಗುಳುವ ಕಣ್ಣು, ಬಾಯಿ ತೆರೆದಾಗ ಕಂಡ ಕೋರೆ ಹಲ್ಲುಗಳುಳ್ಳ ಜೀವಂತ ಹುಲಿಯನ್ನು ಕಾಣುತ್ತಾರೆ. ಒಂದು ಕ್ಷಣ ಅವರೆದೆ ಜುಂ ಎಂದರೂ, ಮರುಕ್ಷಣದಲ್ಲಿ ಸಾವರಿಸಿಕೊಂಡು ಹುಲಿಯನ್ನು ಸಹಜವಾಗಿ, ಪ್ರೀತಿಯಿಂದ, ಸ್ನೇಹದಿಂದ, ಪ್ರಕೃತಿ ಸಹಜವಾದ ಒಂದು ದೃಶ್ಯವನ್ನು ನೋಡುವಂತೆ ನೋಡುತ್ತಾ ನಿಂತರು. ಒಂದೆರಡು ನಿಮಿಷಗಳಲ್ಲಿ ಹುಲಿ ರಾಯರನ್ನು ಗಮನಿಸಲೇ ಇಲ್ಲ ಎಂಬಂತೆ ಅಹಂಕಾರದಿಂದ ನಿಧಾನವಾಗಿ, ಅಷ್ಟೇ ಗಂಭೀರವಾಗಿ ಪಕ್ಕದ ಕೆನ್ನೇರಲೇ ಪೊದೆಯಲ್ಲಿ ನುಸುಳಿತು. ಹಸಿರು ಗಿಡಗಳ ನಡುವೆ ಅದರ ಕೆಂಪು ಹಳದಿ ಬಿಳಿ ಮೈ ಸಾಗಿ ಹೋಗುವ ವರ್ಣರಂಜಿತ ದೃಶ್ಯವನ್ನು ರಾಯರು ನೋಡಿ ಆನಂದದಿಂದ ತಲೆದೂಗಿರುತ್ತಾರೆ.



ಕೋಟೆ ಮುಂದ್ರಾಡಿಯಿಂದ ಹೊರಟ ಅನಂತನಿಗೆ ಸರ್ಕಾರಿ ರಕ್ಷಿತ ಅರಣ್ಯವೆಂದು ಕರೆಯಲ್ಪಡುವ ಜಾಳುಜಾಳಾದ ಬಯಲಿನಲ್ಲಿ ರಸ್ತೆ ಬದಿಯಲ್ಲಿ ದೊಡ್ಡದೊಂದು ಫಲಕದಲ್ಲಿ ಹುಲಿಯ ಚಿತ್ರವಿದ್ದು 'ರಕ್ಷಿತ ಅರಣ್ಯ' ಹುಲಿ ಬೇಟೆಯನ್ನು ನಿಷೇಧಿಸಲಾಗಿದೆ. 'ಸರ್ಕಾರಿ ಆಜ್ಞೆಯನ್ನು ಮೀರಿದರೆ ಉಗ್ರದಂಡನೆ, ವನ್ಯ ಮೃಗಗಳನ್ನು ರಕ್ಷಿಸಿ' ಎಂದು ಬರೆದಿರುವುದನ್ನು ಅನಂತ ನೋಡುತ್ತಾನೆ.

ಅದನ್ನು ಕಂಡು ಅನಂತನಿಗೆ ನಗು ಬರುತ್ತದೆ. ತಂದೆ ನಿಜವಾದ ಹುಲಿಯನ್ನು ನೋಡಿದ್ದರೆ, ತಾನು ಕೇವಲ ಬೋರ್ಡನ್ನು ನೋಡುತ್ತಿರುವುದಾಗಿ, ಹಾಗೇನಾದರು ತಾನು ನಿಜವಾದ ಹುಲಿಯ ದರ್ಶನ ಮಾಡಿದ್ದರೆ ತನ್ನ ಜೀವನ ಯಾತ್ರೆಯೇ ಮುಗಿಯುತ್ತಿತ್ತೆಂದು ಅನಂತ ಯೋಚಿಸುತ್ತಾನೆ.

ರಾಮರಾಯರು ತಮ್ಮ ದಿನಚರಿಯಲ್ಲಿ ಸುವರ್ಣಾವತಿ ನದಿಯನ್ನು ದಾಟಿಸಲು ಅಂಬಿಗ ಹಣ ತೆಗೆದುಕೊಳ್ಳದೆ ಇದ್ದುದರ ಬಗ್ಗೆ ಪ್ರಸ್ತಾಪ ಮಾಡಿರುತ್ತಾರೆ. ಆದರೆ ಅನಂತನ ಕಾಲಕ್ಕಾಗಲೇ ಸುವರ್ಣಾವತಿ ನದಿಗೆ ಹತ್ತು ಕಂಬಗಳ ಸೇತುವೆಯಾಗಿದ್ದು, ನದಿಯ ಆಸುಪಾಸು ಸುಂದರವಾಗಿ

ಕಾಣುತ್ತಿತ್ತು. ಕ್ಯಾಮರಾ ತೆಗೆದು ಫೋಟೋ ತೆಗೆದುಕೊಂಡು ಅನಂತ, ನಾಳೆ ಚಿತ್ರ ನೋಡಿದಾಗ, ಮೆಲುಕು ಹಾಕಬಹುದೆಂದು ಮನುಷ್ಯನ ಪಾಲಿಗೆ ಉಳಿದು ಸಂತೋಷ ಕೊಡುವುದು ಈ ಅನುಭವ ಒಂದೇ ಏನೋ ಎಂದು ಯೋಚಿಸುತ್ತಾನೆ.

ಚಿತ್ರೋಡಿಯಿಂದ ಹೊರಟ ಅನಂತ ಆನೆ ಬೆಟ್ಟಕ್ಕಾಗಿ ಪರ್ವತಾವಳಿಗಳಲ್ಲಿ ಹುಡುಕಿ ಸೋಲುತ್ತಾನೆ. ಆನೆ ಮಲಗಿರುವ ಹಾಗಿರುವ ಬೆಟ್ಟಕ್ಕೆ ಬದಲಾಗಿ, ಬೆಟ್ಟಗಳ ಸಾಲೆಲ್ಲಾ ಕತ್ತರಿಸಿ ತ್ರಿಕೋನಗಳ ಹಾಗೆ, ಚೌಕೋನಗಳ ಹಾಗೆ ಕಂಡಾಗ, ಅಪ್ಪಯ್ಯ ಇಲ್ಲಿಗೆ ಬಂದುಹೋದ ನಂತರ ಇಲ್ಲೇನಾದರೂ ಭೂಕಂಪವಾಗಿತ್ತೇ? ಹಳೆಯ ಬೆಟ್ಟಗಳು ನೆಲದ ಅಡಿಗೆ ಹೋಗಿ ಹೊಸ ಪರ್ವತಗಳು ಉದ್ಭವಿಸಿದವೆ ? ಇಲ್ಲ ಈ ಚಿತ್ರೋಡಿಯೇ ತನ್ನ ಸ್ಥಾನವನ್ನು ಬದಲಾಯಿಸಿಕೊಂಡಿತೆ? ಎಂದು ಯೋಚಿಸುತ್ತಾನೆ. ವಿಚಾರಿಸಲಾಗಿ ಅಲ್ಲಿ ಮ್ಯಾಂಗನೀಸ್ ಅದಿರನ್ನು ತೆಗೆಯುತ್ತಿದ್ದಾರೆಂದು, ಅಲ್ಲಿ ನಿಂತಿರುವ ತ್ರಿಕೋನ, ಚೌಕೋನಗಳೇ ಹಿಂದೆ ಇದ್ದ ಆನೆಗುಡ್ಡವೆಂದು ಹೇಳುತ್ತಾರೆ. ಬಾಲಮುರಿ, ಸೊಂಟದ ದಿಬ್ಬ, ಬೆನ್ ಹುರಿ, ಕತ್ತಿನ ಕಣಿವೆ, ಕಿವಿಬಂಡೆ, ಸೊಂಡಿಲ ಬಳ್ಳಿ ಹಳ್ಳಿಗಳ ಬಗ್ಗೆ ಕೇಳಿದಾಗ "ಆನೆಯೇ ಹೋಯ್ತು ಎಂದ ಮೇಲೆ ಬಾಲಕ್ಕೆ ಕಿವಿಗೆ ಯಾಕೆ ವ್ಯಥೆ ಪಡಬೇಕು ಹೇಳಿ.........ಮೊದಲು ಬಾಲ, ಸೊಂಟ, ಬೆನ್ನು, ಸೊಂಡಿಲು, ಒಂದೊಂದಾಗಿ ಹೋದ ಮೇಲೆ ಆನೆ ಮಾಯವಾಗಿದ್ದು".[೫] ಎನ್ನುತ್ತಾನೆ.

ಆನೆ ಬೆಟ್ಟಕ್ಕೆ ಒದಗಿದ ಅವಸ್ಥೆಗಾಗಿ ಅನಂತನ ಮನಸ್ಸು ಮಿಡಿಯುತ್ತದೆ. ಹೌದು ದೇಶದ ಅಭಿವೃದ್ಧಿಗೆ ಪ್ರಗತಿಗೆ ಸಹಾಯಕವಾಗುವ ಕಾಮಗಾರಿಗಳೇ ಇವೆಲ್ಲಾ, ಅದಿರು, ಕಲ್ಲು, ಮಣ್ಣು ಇತ್ಯಾದಿಗಳನ್ನು ಬಳಸಿಕೊಂಡು ನಾವು ಅಭಿವೃದ್ಧಿಪಡಿಸಬೇಕೆಬುಂದು ನಿಜ. ಆದರೆ ಅಭಿವೃದ್ಧಿಯ ಈ ಕಾಮಗಾರಿಗಳು ದೇಶದ ಸೊಬಗನ್ನೇ ಹಾಳುಗೆಡಹಿದರೆ ಎಂಬ ಅನಂತನ ಆಲೋಚನೆ ಎಲ್ಲಾ ಪರಿಸರ ಪ್ರೇಮಿಗಳ ಮುಂದಿರುವ ಪ್ರಶ್ನೆಯಾಗಿದೆ.

ಕುಂಜಾಲು ಕಣಿವೆಗೆ ರಾಯರು ಬಂದಾಗ, ಕುಂಜಾಲರು ಅಲ್ಲಲ್ಲಿರುವ ಗೇಣಗಲ ಜಾಗದಲ್ಲಿ ಬೇಸಾಯ ಮಾಡಿಕೊಂಡಿರುತ್ತಾರೆ. ಕುಂಜಾಲು ಕಣಿವೆಯ ನಲವತ್ತು ಮೈಲಿ ಘಾಸಲೆಂಯಲ್ಲಿ

ಸುಮಾರು ನೂರು ಕುಟುಂಬಗಳು ಇದ್ದು ಮದುವೆ ಸೆಂಟರಿಷ್ಟರಲ್ಲಿಯೇ ನಡೆಯುತ್ತಿರುತ್ತದೆ. ಬೆಟ್ಟದ ಬುಡದಲ್ಲಿರುವ ಗುಹೆಗಳೇ ಅವರ ಮನೆಗಳಾಗಿರುತ್ತವೆ.

ತಂದೆಯ ಅನುಭವವೇ ಒಂದಾದರೆ ಅನಂತನದೇ ಬೇರೊಂದು ಬಗೆಯದು. ಇದು ಪ್ರವಾಸದ ಉದ್ದಕ್ಕೂ ಅನಂತನ ಗಮನಕ್ಕೆ ಬಂದಿರುತ್ತದೆ. ಬದಲಾದ ಕಾಲಮಾನ, ಸಾಮಾಜಿಕ ಸ್ಥಿತ್ಯಂತರಗಳಲ್ಲಿ ಆದ ಪರಿವರ್ತನೆಗಳು, ಅವರವರ ಜೀವನದೃಷ್ಟಿ ಇವೆಲ್ಲಾ ಇದಕ್ಕೆ ಕಾರಣವಾಗಿರಬಹುದು. ಈ ಬದಲಾವಣೆಗಳು ಅನಿವಾರ್ಯವೇ, ಸೂಕ್ತವೇ, ಸಮಂಜಸವೇ ಎಂಬುದು ವಿಚಾರ ಮಾಡಬೇಕಾದುದು.

ಕುಂಜಾಲು ಕಣಿವೆಯ ಗಿರಿ ಸಂಗಮದಲ್ಲಿ ಬಾಳೆಹೊಳೆಗೆ ಒಂದು ಅಣೆಕಟ್ಟು ಕಟ್ಟುವ ವಿಚಾರ ಸರ್ಕಾರಕ್ಕಿದ್ದು, ಅಲ್ಲಿ ಸರ್ವೆ ಮಾಡುವ ಇಂಜಿನೀಯರ್ ಸುಂದರೇಶ್ ಜೊತೆಗೆ ಜೀಪಿನಲ್ಲಿ ಗಿರಿಸಂಗಮದವರೆಗೆ ಅನಂತ ಪ್ರಯಾಣಿಸುತ್ತಾನೆ. ಕುಂಜಾಲರ ಜಮೀನುಗಳನ್ನೆಲ್ಲಾ ಕುಂಜಾಲು ಗಿರಿಯ ಸಾಹುಕಾರರು ಕೊಂಡಿರುವುದರಿಂದ, ಆ ಜನಾಂಗವೇ ಕಡಿಮೆಯಾಗಿ ಹೋಗಿರುತ್ತದೆ. ಕೆಲವರು ಕೆಟ್ಟು ಪಟ್ಟಣ ಸೇರಿರುತ್ತಾರೆ. ಅವರ ಹೆಣ್ಣುಗಳ ಬಣ್ಣ ಚೆಲುವಿಕೆಗೆ ಮನಸೋತು ಶ್ರೀಮಂತರು ಇವರನ್ನು ಅಡ್ಡದಾರಿಗೆ ಎಳೆದಿರುತ್ತಾರೆ. ಅಲ್ಲಿ ಬಂಡೆಗಳನ್ನು ಚಪ್ಪಡಿ ಕಲ್ಲುಗಳನ್ನಾಗಿ, ಸೈಜು ಕಲ್ಲುಗಳನ್ನಾಗಿ ಪರಿವರ್ತಿಸಲು, ಲೋಹದ ಅದಿರಿನ ಹುಡುಕಾಟಕ್ಕಾಗಿ, ಕುಂಜಾಲರ ಸಂಖ್ಯೆ ಕಡಿಮೆಯಾಗುತ್ತಿರುವ ಬಗ್ಗೆ ಸಂಶೋಧನೆಗಾಗಿ, ಆ ಕಣಿವೆಯಲ್ಲಿ ದರೋಡೆಕೋರರ ಒಂದು ಗುಂಪನ್ನು ಸೃಷ್ಟಿಸಿ, ಒಂದು ಚಲನಚಿತ್ರವನ್ನು ಮಾಡಲು ಅನೇಕ ತಂಡಗಳು, ಅನೇಕ ಕಾರಣಗಳಿಗಾಗಿ ಅಲ್ಲಿಗೆ ಲಗ್ಗೆ ಇಟ್ಟಿರುತ್ತವೆ. ಅವರೆಲ್ಲಾ ನಿರ್ಮಲ ಮನಸ್ಸಿನ ಕುಂಜಾಲರಲ್ಲಿ ಅನೇಕ ಆಮಿಷಗಳನ್ನು ಒಡ್ಡಿ, ಈ ವ್ಯವಸಾಯದ ಬದುಕಿಗಿಂತ, ಪೇಟೆಯ ಬದುಕು ಸುಖಕರವೆಂಬ ಕಲ್ಪನೆಯನ್ನು ಅವರ ತಲೆಗೆ ತುಂಬಿರುತ್ತಾರೆ.

ಈ ಎಲ್ಲದರ ಪರಿಣಾಮವೋ ಎಂಬಂತೆ “ಕಂಜಾಲು ಕಣಿವೆಯಲ್ಲಿ ಕುಂಜಾಲರಿಲ್ಲ, ಅವರ ಎತ್ತುಗಳು ಬೆಟ್ಟ ಹತ್ತಿ ಇಳಿಯುವುದಿಲ್ಲ, ಅವರ ಹೆಂಗಸರ ಮೋಹಕ ಚೆಲುವು ಕಳಕಳಿಸುವ ಮೈಮಾಟ ಕಪ್ಪು ಬಂಡೆಗಳ ಹಸಿರು ಹೊಲಗಳ ನಡುವೆ ಮಿಂಚಿ ಮಾಯವಾಗುವುದಿಲ್ಲ”.[2]

ರಾಮರಾಯರು ಬೆಟ್ಟವನ್ನು ಏರಿ ಕೆಳಗೆ ನೋಡಿದಾಗ ಮುನ್ನೂರು ಅಡಿ ಪ್ರಪಾತದ ಕೆಳಗೆ ನಿಗಿನಿಗಿ ಕೆಂಡದಂತೆ ಕಂಡಿತು ಹೂವು. ದೂರದಿಂದಲೇ ನೋಡಿ ತೃಪ್ತಿಯಾಗದೆಂದು, ಪ್ರಾಣಾಪಾಯವನ್ನು ಲೆಕ್ಕಿಸದೆ ಪ್ರಪಾತವನ್ನು ಹಾವಿನ ಹಾಗೆ ಉಡದ ಹಾಗೆ ತೆವಳಿಕಂಡು ಇಳಿದು ಹೂವಿನ ಗಿಡದ ಬಳಿಯೇ ನಿಂತು ನೋಡಿದರು.

"ಎರಡು ಎರಡೂವರೆ ಅಡಿ ಎತ್ತರದ ಗಿಡ, ಸಣ್ಣ ಪೊದೆಯಂತೆ ಅಷ್ಟಗಲ ಹರಡಿತ್ತು. ವಿಚಿತ್ರವೆಂದರೆ ಗಿಡದಲ್ಲಿ ಒಂದೇ ಒಂದು ಎಲೆ ಇರಲಿಲ್ಲ. ಬರೀ ಗಿಡದ ತುಂಬ ಹೂವೇ ಹೂವು. ಸಣ್ಣ ಸಂಪಿಗೆ ಹೂವಿನ ಹಾಗೆ ಆಕಾರ, ಕಡ್ಡಿಯಂತಿರುವ ಎಸಳುಗಳು, ಈ ಎಸಳುಗಳು ಮೃದು, ಕೋಮಲ, ರೇಶ್ಮೆಯ ನುಣುಪು. ಗಿಡವು ಸಾವಿರ ಟಿಸಿಲುಗಳಾಗಿ ಒಡೆದುಕೊಂಡಿತ್ತು. ಪ್ರತಿ ಟಿಸಿಲಿನ ದಂಟಿನ ತುದಿಯಲ್ಲಿ ತಿಳಿ ಹಸಿರಿನ ಪುಷ್ಪ ಪೀಠ, ಈ ಪೀಠದೊಳಗೆ ಅಡಕವಾಗಿ ಕುಳಿತ ನುಣುಪಾದ ಎಸಳುಗಳು, ಗಿಡದಲ್ಲಿ ಹಸಿರು ಎಲೆ ಇಲ್ಲದ್ದರಿಂದ ಇಡೀ ಗಿಡ ಕೆಂಪಗಾಗಿ, ಕೆಂಡದುಂಡೆಯಾಗಿ ಕಾಣುತ್ತಿತ್ತು. ಸಣ್ಣಗಾಳಿ ಬೀಸಿದಾಗ ಗಿಡ ಕಂಪಿಸಿ ಬೆಂಕಿ ನಾಲಿಗೆ ಅತ್ತಿತ್ತ ಹೊರಳಿದ ಹಾಗೆ ಕಂಡು ಬಂದು ಆ ದೃಶ್ಯ ಚೇತೋಹಾರಿಯಾಗಿ ಕಾಣುತ್ತಿತ್ತು. ಪ್ರತಿ ದಂಟಿನ ತುದಿಯಲ್ಲೂ ಕುಳಿತ ಒಂಟಿ ಹೂವು ಬಿಡಿಬಿಡಿಯಾಗಿ ಕಾಣುವುದರ ಬದಲು ಎರಡು ಎರಡೂವರೆ ಅಡಿ ವಿಸ್ತಾರದ ಆ ಗಿಡ ದೊಡ್ಡದೊಂದು ಕೆಂಪು ಹೂವಿನ ಹಾಗೆ, ಲಕ್ಷ ಹೂಗಳನ್ನು ಚೆಲ್ಲಿದ ರಾಶಿಯ ಹಾಗೆ ಕಾಣುತ್ತಿದ್ದುದ್ದು ಮತ್ತೊಂದು ಕೌತುಕ".[೬]

ಇದು ರಾಯರು ಕಂಡ ಕೆಂಪು ಹೂವಾದರೆ; ತನ್ನ ಚೈತನ್ಯವೆಲ್ಲಾ ಕಣ್ಣಿಗೆ ತಂದುಕೊಂಡು ಬಂಡೆ ಏರಿ ಅನಂತ ಬಗ್ಗಿ ನೋಡಿದ ಏನಿದೆ ಅಲ್ಲಿ? ಕುರುಚುಲು ಗಿಡ, ದತ್ತೂರಿ ಗಿಡ, ಎಕ್ಕದ ಗಿಡ, ನೆಗ್ಗಿ ಮುಳ್ಳು, ಜಾಲಿಮುಳ್ಳು, ಪಾರ್ಥೇನಿಯಂ, ಯುಪಟೋರಿಯಂ.

ಹೆಬ್ಬಂಡೆಯ ಮೇಲೆ ಕುಳಿತ ಅನಂತ ಬಿಕ್ಕಿ ಬಿಕ್ಕಿ ಅತ್ತ. ಜೀವನದಲ್ಲಿ ಅತ್ಯಮೂಲ್ಯವಾದದ್ದನ್ನು ಕಳೆದುಕೊಂಡಂತೆ ಅತೀವ ಸಂಕಟ ಅನುಭವಿಸಿದ. ಇದು ಅನಂತನ ಸಂಕಟ ಮಾತ್ರವಲ್ಲ, ಕಥೆಗಾರರ ಸಂಕಟವೂ ಹೌದು. ಪರಿಸರದ ಮೇಲೆ ಮನುಷ್ಯ ಮಾಡಿದ ವ್ಯಭಿಚಾರವಿದು. ಬದುಕಿನಲ್ಲಿ ನಾವು ಕಳೆದುಕೊಳ್ಳುತ್ತಿರುವ ಮೌಲ್ಯಗಳ ಸತ್ಯ ಇಲ್ಲಿದೆ.

ಇದೇ ಆಶಯವನ್ನೊಳಗೊಂಡ 'ಒಂದು ಜಲಪಾತದ ಸುತ್ತ' ಕಾದಂಬರಿಯಲ್ಲಿ ಒಂದೇ ತಲೆಮಾರಿನಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಗುರುತಿಸಬಹುದಾಗಿದೆ.

ಪ್ರಕೃತಿಯ ನಡುವೆ ಏಕಾಂಗಿಯಾಗಿ ಜೀವಿಸಬೇಕಾದ ರುಜಾರಿ ಸಹಜವಾಗಿಯೇ ಪ್ರಕೃತಿಯಿಂದ ಆಕರ್ಷಿತನಾಗಿ, ಪ್ರಕೃತಿಯನ್ನು ಅಪಾರವಾಗಿ ಪ್ರೀತಿಸುತ್ತ, ಜಲಪಾತವನ್ನು ತನ್ನ ಜೀವನದೊಂದಿಗೆ ಹೋಲಿಸಿಕೊಂಡು ಬದುಕನ್ನು ಸುಂದರಮಯವಾಗಿಸಿಕೊಂಡಿರುತ್ತಾನೆ. ಜೋಗ ಜಲಪಾತದ ಪ್ರವಾಸಿ ಬಂಗಲೆಯಲ್ಲಿ ಅಡಿಗೆಯವನಾಗಿ ನೇಮಕಗೊಂಡ ರುಜಾರಿ ಅಲ್ಲಿಗೆ ಬರುವ ಪ್ರವಾಸಿಗರ ಹವ್ಯಾಸಗಳಿಗೆ ಸ್ಪಂದಿಸುತ್ತಾ, ಪ್ರಕೃತಿಯ ಸವಿಯನ್ನು ಸವಿಯುತ್ತಾ, ಪ್ರಕೃತಿಯಂದಿಗೆ ಪಾಠ ಕಲಿಯುತ್ತಾ ಅಲ್ಲಿನ ಬದುಕಿಗೆ ಹೊಂದಿಕೊಂಡು ಹೋಗುವ ಸರಳ ಸ್ವಭಾವದವನಾಗಿರುತ್ತಾನೆ.

ರುಜಾರಿ ಅಲ್ಲಿ ಕೆಲಸಕ್ಕೆಂದು ಬಂದಾಗ ಅಲ್ಲಿ ಹಚ್ಚಹಸಿರಿನಿಂದ ಕೂಡಿದ ರುದ್ರ ರಮಣೀಯ ದೃಶ್ಯಗಳು ದಟ್ಟವಾದ ಅರಣ್ಯ, ಚಿರತೆ, ಹೆಬ್ಬಾವಿನಂತಹ ಪ್ರಾಣಿಗಳ ನಡುವೆಯೇ ಅವನು ಜೀವಿಸಬೇಕಾಗುತ್ತದೆ. ಆಕಾಶಕ್ಕೆ ತಾಗುವಂತೆ ಬೆಳೆದ ಮರಗಳು, ಮರದಿಂದ ಮರಕ್ಕೆ ತೂಗು ಬಿದ್ದ ಬಳ್ಳಿ, ಮರಗಳ ಕೊಂಬೆಗಳ ಮೇಲೆ ಹಾರಿ ಕುಣಿವ ಕೆಂಜಳಿಲು, ಹಕ್ಕಿಗಳು, ಪೊದೆಯಿಂದ ಪೊದೆಗೆ ಹಾರಿ ಮಾಯವಾಗುವ ಕಾಡುಕೋಳಿ, ಗಂಬೀರವಾಗಿ ಹರಿಯುತ್ತಿದ್ದ ನದಿ, ತಟ್ಟನೆ ಪ್ರಪಾತಕ್ಕೆ ಧುಮ್ಮಿಕ್ಕಿ ಮೇಲೆ ಹಾರುವ ಮಂಜು ಇವು ಜೋಗದ ಜಲಪಾತದ ಸುತ್ತ ಇದ್ದಂತಹ ರುದ್ರ ರಮಣೀಯ ದೃಶ್ಯಗಳು.

ಜೋಗದಲ್ಲಿ ವಿದ್ಯುದಾಗರದ ಕೆಲಸ ಪ್ರಾರಂಭವಾಗುತ್ತಿದ್ದಂತೆ ಅಲ್ಲಿ ಅನೇಕ ಬದಲಾವಣೆಗಳಾಗುತ್ತವೆ. ಪೇಟೆ, ಕಾಲೋನಿ, ಕಛೇರಿ, ವರ್ಕಷಾಪ್ ಎಂದು ದೊಡ್ಡ ಊರೇ ತಲೆ ಎತ್ತುತ್ತದೆ. ಸುಂದರವಾದ ನಿಸರ್ಗ ಕ್ರಮೇಣ ನಗರೀಕರಣಗೊಳ್ಳುತ್ತಿದ್ದ ಹಾಗೆ ಅಲ್ಲಿ ಹೇಗೆ ಸ್ಥಿತ್ಯಂತರಗಳು ಉಂಟಾದವು ಎಂಬುದನ್ನು ಕಾದಂಬರಿಕಾರರು ಚಿತ್ರಿಸುತ್ತಾ ಹೋಗುತ್ತಾರೆ. ಜನಸಂಪರ್ಕವೇ ಇಲ್ಲದ ಕಾಲದಲ್ಲಿ ಓಲೆಕಾರ ಪುಟ್ಟಪ್ಪ ಕೈಯಲ್ಲಿ ತ್ರಿಶೂಲವಿರುವ ಕೆಳಗೆ ಐದು ಗೆಜ್ಜೆ ಕಟ್ಟಿರುವ ಬೆತ್ತದ ಕೋಲು, ಘನ ಘನ ಘನ ಗೆಜ್ಜೆ ಸದ್ದಿನೊಂದಿಗೆ ಬರುತ್ತಿರುತ್ತಾನೆ. ಆದರೆ ಈಗ

ಅಲ್ಲಿಗೆ ಅಂಚೆ ಬಂದಿರುತ್ತದೆ. ನಂತರದಲ್ಲಿ ಚಾರಕೋಲ್ ಬಸ್ಸಿನ ಪ್ರವೇಶ, ಸಾರೋಟುಗಳ ಬದಲಿಗೆ ನಾಲ್ಕು ಗಾಲಿಯ ವಾಹನಗಳ ಓಡಾಟ ಮುಂತಾದವುಗಳು ಬಹಳ ತ್ವರಿತಗತಿಯಲ್ಲಿ ಅಲ್ಲಿಗೆ ಪ್ರವೇಶಿಸಿ ಅಲ್ಲಿನ ಸಹಜ ಸೌಂದರ್ಯವನ್ನು ಹಾಳು ಗೆಡವಿದ್ದನ್ನು ನಾವಿಲ್ಲಿ ಗುರುತಿಬಹುದಾಗಿದೆ. ಪ್ರವಾಸಿ ಬಂಗಲೆಗೆ ಬರುತ್ತಿದ್ದ ಬ್ರಿಟಿಷ್ ಅಧಿಕಾರಿಗಳ ವರ್ತನೆಗಳು, ನಂತರದಲ್ಲಿನ ಅಧಿಕಾರಿಗಳ ವರ್ತನೆಗಳು ಹಾಗೂ ಹವ್ಯಾಸಗಳು ಸಂಪೂರ್ಣ ಭಿನ್ನವಾಗಿರುವುದನ್ನು ಗುರುತಿಸಬಹುದಾಗಿದೆ.

ಜೋಗದಲ್ಲಿ ವಿದ್ಯುದಾಗಾರ ಸ್ಥಾಪನೆಯ ಸಲುವಾಗಿ ಆದ ಬದಲಾವಣೆಗಳಿಂದ ಜಲಪಾತವೇ ಕಣ್ಮರೆಯಾಗಲಿರುತ್ತದೆ. ಕರೆಂಟ್ ಬೇಕು ಅಂದರೆ ಜಲಪಾತವಿರುವುದಿಲ್ಲ, 'ನಮಗೆ ಕರೆಂಟ್ ಮುಖ್ಯ ಅಲ್ವಾ' ಎನ್ನುವ ಇಂಜಿನಿಯರನ ಮಾತು ಅಮೂಲ್ಯವಾದುದನ್ನು ಕಳೆದುಕೊಳ್ಳುತ್ತಿರುವುದರ ಅರಿವೇ ಇಲ್ಲದವರ ಮಾತಾಗಿದೆ.

ಸುಂದರವಾದಜಲಪಾತ, ಒಂದೇ ಧಾರೆಯಲ್ಲಿ ಮೇಲಿನಿಂದ ಜಿಗಿಯುವ ರಾಜ, ನಡುವೆ ಬಂದು ರಾಜನಿಗೆ ತೆಕ್ಕೆ ಬೀಳುವ ರೋರರ್, ಹುಡಿಹುಡಿಯಾಗಿ ಬೀಳುವ ರಾಕೆಟ್, ಬಾಗಿ ಬಳುಕುವ ಕೆಳಗೆ ಬೀಳುವ ಲೇಡಿ........

ಸುರಿಯುವ ಹಾಲು, ಹಿಮದ ರಾಶಿ, ಹತ್ತಿಯ ಚೂರು, ನೀರಿನ ಹನಿಗಳು, ಬೆಳ್ಳಿಗಾಜಿನ ತುಣುಕುಗಳು ನೊರೆ......ನೊರೆ.......ನೊರೆ...... ಸಾವಿರಾರು ಪಾರಿವಾಳಗಳು, ಹಿನ್ನಲೆಯ ಕಡು ಕಪ್ಪು ಬಂಡೆ, ಬಂಡೆಯ ಮೇಲೆ ಬೆಳೆದಿರುವ ಹಸಿರು ಇದು ಮೊದಲಿಗೆ ಇದ್ದ ಜಲಪಾತದ ಸೌಂದರ್ಯವಾದರೆ, ನಿರೂಪಕ ತನ್ನ ಕುಟುಂಬದೊಂದಿಗೆ ಜೋಗ ಜಲಪಾತ ನೋಡಲು ಹೋದಾಗ ಮಕ್ಕಳ ಪ್ರಶ್ನೆ ಇದಾಗಿದೆ.

"ಅಪ್ಪ ರಾಜ ಎಲ್ಲಿ?
ರೋರರ್ ಎಲ್ಲಿ ಪಪ್ಪ?
ರಾಕೆಟ್ ಕೂಡ ಇಲ್ವಲ್ಲ
ರಾಣೀನೂ ಇಲ್ಲ
ನೀರು ಇಲ್ಲ......ಕಾಮನ ಬಿಲ್ಲು ಇಲ್ಲ......"[೮]

ಹಸಿರು ಕಾಣದ ಹಕ್ಕಿಗಳ ಹಾರಾಟ ಇಲ್ಲದ, ನೀರ ಪಸೆ ಇಲ್ಲದ, ಕಡುಕಪ್ಪು ಬಂಡೆ, ಪಾತಾಳದಿಂದ ಆಕಾಶದವರೆಗೆ ಬರಿದಾಗಿ, ಏರುತ್ತಿರುವ ಬಿಸಿಲಿಗೆ ಕಾಯುತ್ತ ಬಿದ್ದುಕೊಂಡಿತ್ತು. ನಿರೂಪಕರಿಗೆ ಉಸಿರು ಗಂಟಲಲ್ಲಿ ಸಿಕ್ಕಿಕೊಂಡಂತಾಗಿ, ಕತ್ತಲೆ ಬಂದಂತಾಗಿ ಆತ ಎಲ್ಲರಿಗೂ ಹೇಳಿದ. "ಬನ್ನಿ.....ಊರಿಗೆ ಹೋಗೋಣ..... ಇಲ್ಲಿ ಏನೂ ಉಳಿದಿಲ್ಲ. ಇಂದಿನವರು ಏನನ್ನೂ ಉಳಿಸಿಲ್ಲ, ಬನ್ನಿ" ಎನ್ನುವ ಕಾದಂಬರಿಯ ಅಂತ್ಯ ಅರ್ಥಪೂರ್ಣವಾಗಿದೆ. 'ಕುಂಜಾಲು ಕಣಿವೆಯ ಕೆಂಪು ಹೂವು' ಕಾದಂಬರಿಯಲ್ಲಿನ ಕಥಾನಾಯಕ ಅನಂತನ ಅನುಭವದಂತೆ ಇಲ್ಲಿನ ಕಥಾನಾಯಕನ ಅನುಭವವೂ ಆಗಿರುವುದನ್ನು ಪ್ರಮುಖವಾಗಿ ಗುರುತಿಸಬಹುದಾಗಿದೆ. ಇದು ಮಾನವ ಪ್ರಕೃತಿ ಮೇಲೆ ನಡೆಸಿರುವ ದೌರ್ಜನ್ಯವಾಗಿದೆ.

ಇದೇ ರೀತಿ ವಿಷಾನಿಲ ಕಾದಂಬರಿಯಲ್ಲೂ ಗೊಬ್ಬರದ ಕಾರ್ಖಾನೆ ಸ್ಥಾಪನೆಯ ಮೊದಲಿಗೆ ಇದ್ದ ಶಾಂತಿಗೆರೆಯ ಸುಂದರ ಪರಿಸರ ಕಾರ್ಖಾನೆ ಸ್ಥಾಪನೆಯ ನಂತರದ ಸ್ಥಿತ್ಯಂತರವನ್ನು ಗುರುತಿಸಬಹುದಾಗಿದೆ.

**ಆರ್ಥಿಕ ಸ್ಥಿತ್ಯಂತರಗಳು**

ಮಾನವನು ಪ್ರಾರಂಭದಲ್ಲಿ ತನ್ನ ಮೂಲಭೂತ ಅವಶ್ಯಕತೆಗಳಾದ ಆಹಾರ, ವಸತಿ ಮುಂತಾದವನ್ನು ಪೂರೈಸಿಕೊಳ್ಳಲು ಪ್ರಕೃತಿಯನ್ನು ಆಶ್ರಯಿಸಿದ್ದನು. ಬುದ್ಧಿ ವಿಕಾಸವಾದಂತೆ, ಆಸೆಗಳು ಹೆಚ್ಚಾದವು. ಇನ್ನೂ ಹೆಚ್ಚು ಗಳಿಸಬೇಕೆಂಬ ದುರಾಸೆ, ಸ್ವಾರ್ಥದಿಂದ ದಮನಕಾರಿ ಕೃತ್ಯ ಎಸಗುವಲ್ಲಿ ಮಾನವ ತೊಡಗುವುದನ್ನು ಕಾಣಬಹುದು. ಆರ್ಥಿಕ ಸಂಪನ್ಮೂಲದ ಬಳಕೆಯಿಂದ ಆರ್ಥಿಕ ಕ್ಷೇತ್ರವು ಹದಗೆಡುತ್ತಿದೆ. ವಸಾಹತುಶಾಹಿಯ ಪ್ರವೇಶದಿಂದಲೇ ಆರ್ಥಿಕ ಸ್ಥಿತ್ಯಂತರಗಳು ಕಂಡುಬಂದವು.

ಡಿಸೋಜರವರ ಕಾದಂಬರಿಗಳಲ್ಲಿ ನೆಮ್ಮದಿಯ ತಾಣವಾದ ಪರಿಸರದಲ್ಲಿ ಕೈಗಾರಿಕಾ ಸ್ಥಾಪನೆ, ಅಣೆಕಟ್ಟು ನಿರ್ಮಾಣ ಹಾಗೂ ಹಣದ ಪ್ರವೇಶದಿಂದ ಹೇಗೆ ಅವನತಿ ಹೊಂದುತ್ತದೆ ಎಂಬುದನ್ನು ತಿಳಿಸುತ್ತದೆ. ಕಷ್ಟಪಟ್ಟು ನ್ಯಾಯಯುತವಾಗಿ ಸಂಪಾದಿಸಿದರೆ ಅದು ನಾವೆ ಗಳಿಸಿರುವ ಸಂಪಾದನೆ ಎಂಬ ನೆಮ್ಮದಿ ಇರುತ್ತದೆ, ಆದರೆ ವಾಮಮಾರ್ಗದಲ್ಲಿ ಅತಿ ಆಸೆಯಿಂದ ದಿಢೀರ್

ಶ್ರೀಮಂತನಾಗುವ ಇಲ್ಲವೇ ಸುಲಭವಾಗಿ ಹಣ ಪಡೆಯುವ ಮನುಷ್ಯನ ನೀಚಗುಣ, ಸ್ವಭಾವವನ್ನು ತಿಳಿಯಲು ಮಾಡಿದ್ದಾರೆ. ಮೋಸ ಮಾಡುವವರು ಯಾವ ತಪ್ಪಿಗೂ ಸಿಗದೆ ಅವರ ಪಾಡಿಗೆ ಅವರು ಶ್ರೀಮಂತರಾಗುತ್ತಾರೆ. ಆದರೆ ಬಡವರು ಬಡವರಾಗಿಯೇ ಉಳಿಯುತ್ತಾರೆ. ಇವೇ ಮುಂತಾದ ಕೆಲ ಅಂಶ ಡಿಸೋಜಾರವರ ಕಾದಂಬರಿಯಲ್ಲಿ ಆರ್ಥಿಕ ಸ್ಥಿತ್ಯಂತರವನ್ನು ಗುರುತಿಸಲು ಸಹಕಾರಿಯಾಗಿದೆ.

'ದ್ವೀಪ' ಕಾದಂಬರಿಯಲ್ಲಿ ಹೊಸಮನೆ ಹಳ್ಳಿಯ ಹತ್ತಿರದಲ್ಲಿ ನಿರ್ಮಿಸಲಾದ ಅಣೆಕಟ್ಟಿನಿಂದ ಊರವರೆಲ್ಲಾ ಗುಳೇ, ಹೊರಟು ಬೇರೆಡೆಗೆ ಹೋಗಿ ಜಮೀನು ಮಾಡುತ್ತಿದ್ದಾರೆ. ಗಣಪಯ್ಯನ ಸಂಸಾರಕ್ಕೆ ಪರಿಹಾರ ಸಿಗುವುದರಲ್ಲಿ ವಿಳಂಬವಾಗುತ್ತದೆ. ಮನುಷ್ಯ ಕ್ರಮೇಣ ಸ್ವಾರ್ಥ ಮತ್ತು ಲಾಲಸೆಯಿಂದ ಕೇವಲ ಹಣಕ್ಕಾಗಿ ಕೆಲಸ ಮಾಡುತ್ತಿದ್ದಾನೆ. ಆತನಿಗೆ ಮಾನವಿಯ ಮೌಲ್ಯಗಳು ಬೇಕಾಗಿಲ್ಲ. ಮಾನವನ ಅತಿಕ್ರಮಣ ಪ್ರವೃತ್ತಿ ಹಾಗೂ ಬಂಡವಾಳಶಾಹಿ ಪ್ರವೃತ್ತಿಗಳು ಆರ್ಥಿಕ ಸ್ಥಿತ್ಯಂತರಕ್ಕೆ ಪ್ರಮುಖ ಕಾರಣಗಳಾಗಿವೆ. ಮುಳುಗಡೆ ಆಗಲಿರುವ ಪ್ರದೇಶದಲ್ಲಿ ಎಲ್ಲರಿಗೂ ಪರಿಹಾರ ಸಿಕ್ಕಿದ್ದರೆ ಗಣಪಯ್ಯನಿಗೆ ಮಾತ್ರ ಸಿಕ್ಕಿಲ್ಲ ಹೇರಂಭನ ಕುಟುಂಬಕ್ಕೆ ಹಾಗೂ ಪರಮೇಶ್ವರನ ಕುಟುಂಬಕ್ಕೆ ಸುಲಭವಾಗಿ ಪರಿಹಾರ ಸಿಗುತ್ತದೆ. ಅದು ಸಮಸ್ಯೆ ಎಂದೆನಿಸುವುದಿಲ್ಲ. ಆದರೆ ಮುಳುಗಡೆಯಾಗುತ್ತಿದ್ದಂತೆಯೇ ಪರಿಹಾರ ನಿರ್ಧರಿಸಲಿಕ್ಕಾಗಿ ಪ್ರತಿಯೊಬ್ಬರೂ ಒಂದು ಬೆಲೆ ಕಟ್ಟುವ ಅಗತ್ಯ ಸರ್ಕಾರಕ್ಕೆ ಬರುತ್ತದೆ. ಆಗ ವ್ಯಕ್ತಿಗಳನ್ನು ಅವರವರ ಆಸ್ತಿಗಳ ಲೆಕ್ಕದಲ್ಲಿ ವಿಂಗಡಿಸಿ ಅಳೆಯಲಾಗುತ್ತದೆ. ಇಷ್ಟೆಲ್ಲಾ ಮಾಡಿಯಾದ ಮೇಲೆ ಗಣಪಯ್ಯ ಪರಿಹಾರಕ್ಕಾಗಿ ಮುಳುಗಡೆ ಆಫೀಸಿಗೆ ಅಲೆಯುತ್ತಾನೆ. "ಮತ್ತೊಂದ್ಸಾರಿ ಆಫೀಸಿಗೆ ಹೋಗಿ ಬಾ ಗಣಪಯ್ಯ ಹತ್ತೋ ಐದೋ ಕೊಟ್ರೆ ಕೆಲಸ ಆದಿತು"ಎಂಬ ಹೇರಂಭನ ಮಾತಿನಲ್ಲಿ ಸರ್ಕಾರಿ ಅಧಿಕಾರಿಗಳು ಕೇವಲ ಹಣ ನೀಡಿದರೆ ಮಾತ್ರ ಕೆಲಸ ಮಾಡುತ್ತಾರೆಂದು ತಿಳಿದು ಬರುತ್ತದೆ. ಹಣ ನೀಡಲು ಅಸಾಧ್ಯವಾದರೆ ಅವರ ಕೆಲಸದಲ್ಲಿ ಹಾಗೆಯೇ ಉಳಿಸಿಕೊಳ್ಳುತ್ತಾರೆ. ಕ್ರಮೇಣ ಸ್ವಾರ್ಥ ಅಧಿಕಾರಿಗಳು ಗಣಪಯ್ಯನ ಜಮೀನಿಗೆ ಸಂಬಂಧಿಸಿದ ಫೈಲು ಕಳೆದು ಹೋಗಿದೆ ಎಂಬ ತೀರ್ಮಾನಕ್ಕೆ ಬರುತ್ತಾರೆ.

'ಮುಳುಗಡೆ' ಕಾದಂಬರಿಯಲ್ಲಿ ಹಣ ಮಾಡಬೇಕೆಂಬ ಆಸೆಯಿಂದ ರಾತ್ರೋ ರಾತ್ರಿ ಖಾಲಿ ಪ್ರದೇಶದಲ್ಲಿ ಅಡಕೆ ಸಸಿ ನೆಟ್ಟು ಪರಿಹಾರ ಪಡೆಯುತ್ತಾರೆ. ಮಾನವ ತಾನೂ ಆರ್ಥಿಕವಾಗಿ ಸಬಲನಾಗುವುದರ ಯೋಚನೆಯಲ್ಲಿ ಅದಕ್ಕೆ ಪೂರಕವಾದ ಕೆಟ್ಟ ಮಾರ್ಗಗಳನ್ನು

ರೂಡಿಸಿಕೊಳ್ಳುವುದನ್ನು ಈ ಕಾದಂಬರಿ ತಿಳಿಸಿಕೊಡುತ್ತದೆ. ಈ ಅಂಶವನ್ನು 'ಒಡ್ಡು' ಕಾದಂಬರಿಯಲ್ಲಿಯೂ ಗುರುತಿಸಬಹುದು.

'ನಮ್ಮನ್ನ ಮುಳುಗಿಸಲಿಕ್ಕೆ... ಸರ್ವೆಯರು ಬಂದು ಜಮೀನನ್ನು ಅಳಕೊಂಡು ಹೋಗ್ತಾನೆ... ಲಂಚ ಕೊಡದಿದ್ರ ಅಳೀತಾನೆ ಮೋಸ ಮಾಡ್ತಾನೆ. ಇಂಜಿನಿಯರ್ ಅವನು ಅಳೆದದ್ದನ್ನು ಬೆಲೆ ಕಟ್ಟಲಿಕ್ಕೆ ಬರ್ತಾನೆ... ಲಂಚ ಕೊಡದಿದ್ರೆ ಹೊಸ ಮನೇನ ಹಳೇ ಮನೆ ಅಂತ ಬರೀತಾನೆ...ಗುಮಾಸ್ತ ಪರಿಹಾರದ ಬಿಲ್ಲು ಬಂದಿದೆ... ಎಷ್ಟು ಕೊಡ್ತೀರಾ ಲಂಚ ಬಿಲ್ಲು ಪಾಸ್ ಮಾಡಲಿಕ್ಕೆ? ಅಂತಾನೆ... ಜವಾನ ಚೆಕ್ಕು ಬಂದಿರೋ ವಿಷಯ ಹೇಳಿ ಲಂಚ ಕೇಳ್ತಾನೆ...ಥು ಥು ಸರಕಾರ ಹಾಗೆ ಮುಳುಗಿಸುತ್ತೆ... ಈ ಲೌಡಿ ಮಕ್ಳು ಹೀಗೆ ಮುಳುಗಿಸ್ತಾರೆ".[೯] ಎನ್ನುವ ಪಂಡಿತನ ಮಾತಿನಲ್ಲಿ ಆರ್ಥಿಕವಾಗಿ ದುರ್ಬಲರಾದವರು ಯಾವ ಸಂಕಷ್ಟ ಅನುಭವಿಸಬೇಕಾಗುತ್ತದೆ ಎಂಬ ಧ್ವನಿ ಇಲ್ಲಿದೆ.

'ಒಡ್ಡು' ಕಾದಂಬರಿಯಲ್ಲಿ ಚಿತ್ರೋಡಿ ಮುಳುಗಡೆಯಾಗುತ್ತದೋ ಇಲ್ಲವೋ ಎನ್ನುವುದನ್ನು ತಿಳಿಸಲು ಕಾಲಹರಣ ಮಾಡುವ ಮೂಲಕ ಸರ್ಕಾರ ಹನುಮಂತಪ್ಪನನ್ನು ಬಲಿ ತೆಗೆದುಕೊಳ್ಳುತ್ತದೆ. ಆರ್ಥಿಕವಾಗಿ ಪ್ರಬಲವಿದ್ದರೆ ಮಾತ್ರ ಈ ಸಮಾಜದಲ್ಲಿ ಬದುಕಲು ಸಾಧ್ಯವಾಗಿದೆ." "ಆ ರೈತನ ಕಷ್ಟ ನಿಮಗೆ ಗೊತ್ತಿಲ್ಲ ಸಾರ್ ಅವನನ್ನು ನೀವು ಸ್ವಲ್ಪ ಸ್ವಲ್ಪವಾಗಿ ಕೊಂದು ಹಾಕಿದೀರ ಮೊದಲು ರಸ್ತೆ ಅಂದ್ರಿ, ನಂತರ ಪರಿಹಾರ ಅಂದ್ರಿ,ಪರಿಹಾರ ಜಾಸ್ತಿಯಾಗುತ್ತೆ ರಸ್ತೆ ಮಾಡಿಸಿ ಕೊಡ್ತೀವಿ. ಅಂದ್ರಿ ಹದಿನೈದು ವರ್ಷದಿಂದ ಅವನಿಗೆ ರಸ್ತೇನೂ ಇಲ್ಲ,ಪರಿಹಾರವೂ ಇಲ್ಲ,"[೧೦] ಪರಿಹಾರದ ಹೆಸರಿನಲ್ಲಿ ಮಾಡಬೆಕಾದ ಎಲ್ಲಾ ಶೋಷಣೆಗಳನ್ನು ಸರ್ಕಾರಿ ಅಧಿಕಾರಿಗಳು ಮಾಡುತ್ತಾರೆ. ಅಭಿವೃದ್ಧಿ ಹೆಸರಿನಲ್ಲಿ ಹಣವನ್ನು, ಮಾನವ ಸಂಪನ್ಮೂಲವನ್ನು ಪೋಲು ಮಾಡುತ್ತಿದ್ದಾರೆ. ಅನಾವಶ್ಯಕವಾಗಿ ವಸ್ತುಗಳ ದುರುಪಯೋಗ ಆಗುತ್ತಿದೆ. "ಒಡ್ಡು ಅಭಿವೃದ್ಧಿಗೆ ಬದಲಾವಣೆಗೆ ಆಧುನಿಕತೆಯ ಭೋಗ ಜೀವನಕ್ಕೆ ಒಡ್ಡಿಕೊಂಡು, ತನಗರಿಯದೇನೇ ಪತನದತ್ತ ಸಾಗುತ್ತಿರುವ ಸ್ವತಂತ್ರ ಭಾರತದ ಕಠೋರ ವಾಸ್ತವದ ನುಡಿ ಚಿತ್ರವಾಗಿದೆ." [೧೧]

ಕುಂಜಾಲು 'ಕಣಿವೆಯ ಕೆಂಪು ಹೂವು' ಕಾದಂಬರಿಯಲ್ಲಿ ಕೋಟೆ ಮುಂದ್ರಾಡಿಯಲ್ಲಿ ಲಕ್ಷ್ಮೀನಾರಾಯಣ ದೇವಸ್ಥಾನವಿದ್ದು ಅದಕ್ಕೊಬ್ಬ ಪುರೋಹಿತರು ಇರುತ್ತಾರೆ. ದಾಯಾದಿಗಳಿಂದ ವಂಚಿತರಾದ ರಾಜಣ್ಣ ದಂಪತಿಗಳಿಗೆ ದೇವಸ್ಥಾನದ ಪಾಳಿಯಲ್ಲೇ ಮನೆಮಾಡಿಕೊಂಡಿರಲು

ಪುರೋಹಿತರು ಅನುವು ಮಾಡಿಕೊಟ್ಟಿರುತ್ತಾರೆ. ಪುರೋಹಿತರ ಸಾವಿನ ನಂತರ ಆ ದೇವಸ್ಥಾನಕ್ಕೆ ಸೇರಿದ್ದ ಐದು ಎಕರೆ ಜಮೀನನ್ನು ಕಬಳಿಸಿಕೊಂಡಿರುತ್ತಾರೆ. ಲಕ್ಷ್ಮೀನಾರಾಯಣ ದೇವರ ಭೂಮಿ ಎಂಬ ಶಾಸನದ ಅಡಿಯಲ್ಲಿ ಇರುವುದನ್ನು ತಿಳಿದುಕೊಂಡ ರಾಜಣ್ಣ ತನ್ನ ಹೆಸರನ್ನೇ ಲಕ್ಷ್ಮೀನಾರಾಯಣ ದೇವರೆಂದು ಬದಲಿಸಿಕೊಂಡು ಶ್ರೀಮಂತನಾಗಿ, ಮಿಲ್ಲು, ಭವ್ಯವಾದ ಬಂಗಲೆ ಕಟ್ಟಿಕೊಂಡಿರುತ್ತಾನೆ. ದೇವರ ಹೆಸರಿನಲ್ಲಿ ಹಣವನ್ನು ಸುಲಿಗೆ ಮಾಡುವವರು ಕೆಲವರಾದರೆ ದೇವರ ಹಣವನ್ನೇ ನುಂಗಿ ಹಾಕುವಂತಹ ಲಕ್ಷ್ಮೀನಾರಾಯಣ ಹಂತಹವರು ಅನೇಕರಿದ್ದಾರೆ ಎಂಬುದನ್ನು ನಾವಿಲ್ಲಿ ಕಾಣಬಹುದಾಗಿದೆ.

ಇದೇ ರೀತಿ “ಒಂದು ಜಲಪಾತದ ಸುತ್ತ” ಕಾದಂಬರಿಯಲ್ಲಿ ರುಜಾರಿಯೊ ಅಣ್ಣ ಮನುವೇಲ ತಂದೆಯನ್ನು ಹೆದರಿಸಿ ಕಾಗದ ಪತ್ರಗಳಿಗೆ ರುಜು ಹಾಕಿಸಿಕೊಂಡು ಆಸ್ತಿ ಎಲ್ಲವನ್ನು ಕಬಳಿಸಿರುತ್ತಾನೆ. ಹುಟ್ಟುತ್ತಾ ಅಣ್ಣ ತಮ್ಮಂದಿರು ಬೆಳೆಯುತ್ತಾ ದಾಯಾದಿಗಳು ಎನ್ನುವ ಹಾಗೆ ತಮ್ಮನಿಗೆ ಮೋಸ ಮಾಡಿರುತ್ತಾನೆ. ಇದೇ ಕೊರಗಿನಲ್ಲಿ ಅವನ ತಂದೆ ಅಂತೋನಿ ಪ್ರಾಣ ಬಿಟ್ಟಿರುತ್ತಾರೆ.

ಹಾಗೆಯೇ ‘ವಿಷಾನಿಲ’ ಕಾದಂಬರಿಯಲ್ಲಿ ದೇವಸ್ಥಾನದ ದತ್ತಿ ಜಮೀನು ಪಡೆಯುವ ಬಗ್ಗೆ ಗುಂಡಾಭಟ್ಟರ ಪ್ರಯತ್ನವನ್ನು ನಾವಿಲ್ಲಿ ಸ್ಮರಿಸಬಹುದು. ಮಾನವನಲ್ಲಿರುವ ಸುಲಭ ಮಾರ್ಗದಲ್ಲಿ ಹಣಗಳಿಸುವ ಪ್ರವೃತ್ತಿ ಅವನ ಮೌಲ್ಯಗಳ ಕುಸಿತಕ್ಕೆ ಕಾರಣವಾಗುತ್ತದೆ. ರಾಮರಾಯರ ಕಾಲದಲ್ಲಿ ಆನೆಗಳ ಸಂರಕ್ಷಣೆಗೋಸ್ಕರ ತನ್ನ ಪ್ರಾಣವನ್ನೇ ತ್ಯಾಗ ಮಾಡಿದ್ದ ಮಾದಯ್ಯನಂತಹವರು ಇರುತ್ತಾರೆ. ಆದರೆ ಅನಂತ ಆ ಪ್ರದೇಶಕ್ಕೆ ಬರುವಷ್ಟರಲ್ಲಿ ಅಲ್ಲಿ ಕಾಡೂ ಇರುವುದಿಲ್ಲ. ಆನೆಗಳೂ ಇರುವುದಿಲ್ಲ. ಆದರೆ ಕಾಡಿನ ರಕ್ಷಕರಾದ ಗಾರ್ಡ್‌ಗಳು ಮಾತ್ರ ಇರುತ್ತಾರೆ.ಅವರ ನಡವಳಿಕೆ ಅವರ ಆದರ್ಶ ಅವರ ಬಾಯಿಂದಲೇ ಕೇಳಬೇಕು.

“ಜನ ಮರ ಕಡೀತಾರೆ......ಹಾವು. ಹುಲಿ. ಚಿರತೆ ಚರ್ಮಕ್ಕಾಗಿ ಕೆಲವರು ಬರುತ್ತಾರೆ. ಆನೆ ದಂತಕ್ಕಾಗಿ, ಕಾಡು ಕೋಣದ ಕೊಂಬಿಗಾಗಿ ಬರುತ್ತಾರೆ. ಕೆಲವರನ್ನು ಹಿಡೀತೇವೆ. ಕೆಲವರನ್ನು ಬಿಡುತ್ತೇವೆ. ನಮಗೂ ನಾಲ್ಕು ಕಾಸು ಸಿಗಬೇಕಲ್ಲ. ಒಂದು ಆನೆ , ಒಂದು ಹುಲಿ ಹೋದ್ರೆ ಏನಂತೆ?

ನಮಗೆಲ್ಲ ನೂರು, ಸಾಹೇಬ್ರೀಗೆ ಐನೂರು ಶ್ರೀಗಂಧ ಬೀಟೆಯಿಂದಲೂ ಅಷ್ಟು, ಇಷ್ಟು ಸಿಗುತ್ತವೆ". ಇದು ಅರಣ್ಯ ರಕ್ಷಿಸಬೇಕಾದ ಗಾರ್ಡ್‌ಗಳ ಕಾರ್ಯವೈಖರಿ,

ಅಣೆಕಟ್ಟು ನಿರ್ಮಾಣದಂತಹ ಕಾರ್ಯಗಳಿಂದ ಜನರ ಸಾಮಾಜಿಕ, ಆರ್ಥಿಕ, ಜೀವನ ಶೈಲಿಯಲ್ಲಿ ಸ್ಥಿತ್ಯಂತರಗಳಾಗುವುದನ್ನು ಡಿಸೋಜರವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ. ಕುಂಜಾಲು ಕಣಿವೆಯ ಗಿರಿಸಂಗಮದಲ್ಲಿ ಬಾಳೆಹೊಳೆಗೆ ಅಡ್ಡಲಾಗಿ ಅಣೆಕಟ್ಟು ಕಟ್ಟುವ ಕಾರ್ಯ ನಡೆದಿರುತ್ತದೆ. ಅಲ್ಲಿನ ಕುಂಜಾಲರು ಕೆಲವು ಕಾರಣದಿಂದ ವ್ಯವಸಾಯವನ್ನು ತೊರೆದಿರುತ್ತಾರೆ. ಹಾಗೂ ಅವರು ಇಲಾಖಾ ಕೆಲಸಗಳಿಗೆ ಹೋಗುತ್ತಿರುತ್ತಾರೆ.

ವಿದ್ಯುದಾಗಾರ ಸ್ಥಾಪನೆಯಿಂದಾಗಿ 'ಒಂದು ಜಲಪಾತದ ಸುತ್ತ' ಕಾದಂಬರಿಯಲ್ಲಿ ಸುಂದರವಾಗಿದ್ದ ಪರಿಸರ ನಗರೀಕರಣಗೊಳ್ಳುವ ಚಿತ್ರಣವಿದೆ. ಬ್ರಿಟಿಷರ ಕಾಲದಲ್ಲಿದ್ದ ನೀತಿ ನೀಯತ್ತುಗಳು ಮಾಯವಾಗಿ, ಅಧಿಕಾರ ದುರಾಸೆ ಇರುವ ಅಧಿಕಾರಿಗಳ ಪ್ರವೇಶದಿಂದಾಗಿ. ಆಧುನೀಕರಣ ಹಾಗೂ ಮೌಲ್ಯಗಳ ಕುಸಿತದಿಂದಾಗಿ ಜನರ ಮನೋಭಾವವೂ ಬದಲಾಗಿರುತ್ತದೆ.

ನ್ಯಾಯ ನಿಯತ್ತಿನಲ್ಲಿ ಬದುಕಿದ ರುಜಾರಿಗೆ ಕೆಲವು ವಿಷಯಗಳು ಬಹಳ ಸಂಕಟವೆನಿಸುತ್ತದೆ.ಮೇಟಿ ಬಂಗಲೆ ಬಾಡಿಗೆ ಕಟ್ಟದೆ ಬಳಸಿಕೊಂಡರೆ ರುಜಾರಿ ಪ್ರತಿಭಟಿಸುತ್ತಿದ್ದ. ಎರಡೇ ಮೊಟ್ಟೆ ಹಾಕಿ ಆಮ್ಲೇಟ್ ಮಾಡಿ ನಾಲ್ಕು ಮೊಟ್ಟೆ ಹಣ ತೆಗೆದುಕೋ ಎಂದರೆ ಒಪ್ಪುತ್ತಿರಲಿಲ್ಲ. ಕೋಳಿ, ಕುರಿ ಊಟಕ್ಕೆ ಏನೇನು, ಎಷ್ಟೆಷ್ಟು ಖರ್ಚಾಗಿದೆ ಎಂದು ಸ್ಪಷ್ಟವಾಗಿ ಬರೆದು ಸಂಬಂಧಪಟ್ಟವರಿಗೆ ತೋರಿಸಿ ಅಷ್ಟೇ ಹಣಪಡೆಯುತ್ತಿದ್ದ. ರಾಜಮಹಾರಾಜರು, ದಿವಾನರು, ಡೆಪ್ಯೂಟಿ ಕಲೆಕ್ಟರ್ ಮುಂತಾದ ಉನ್ನತ ವ್ಯಕ್ತಿಗಳನ್ನು ಕಂಡಿದ್ದ ರುಜಾರಿ, ಇರ್‌ವಿನ್ ಸಾಹೇಬರು ಕಾಸಿಗೆ ಕಾಸು ಕೊಟ್ಟು ಚುಕ್ತಾ ಮಾಡಿ ಹೋದರು, ಇಸ್ಮಾಯಿಲರು ಭಕ್ಷೀಸು ಕೊಟ್ಟು ಹೋದರು ಎಂದು ಸ್ಮರಿಸುತ್ತ "ಈಗಿನವರು ಊಟದ ಹಣ ಕೇಳಿದರೆ ಅವರು ಕೊಡಲಿಲ್ಲವಾ ಇವರು ಕೊಡಲಿಲ್ಲವಾ ಎನ್ನುತ್ತಾರೆ. ಬಂಗಲೆಯಲ್ಲಿರುವ ಪೂಟ್ ರಗ್ಗನ್ನು, ಟವಲನ್ನು, ಹೊತ್ಕೊಂಡು ಹೋಗುತ್ತಾರೆ. ಅರವತ್ತು ರೂಪಾಯಿ ಬಿಲ್ ಮಾಡಿದರೆ ನಲವತ್ತೇ ಕೊಡತಾರೆ. ಬಂಗಲೆ ಕುಕ್ ಅಂದ್ರೆ ಬೂಡ್ಸ್ ಒರೆಸೋನು ಅಂತ ತಿಳೀತಾರೆ. ನಾಲ್ಕು ದಿನ ಇರತಾರೆ ಮೂರೇ ದಿನದ ಬಾಡಿಗೆ

ಸಾಕಲ್ಲ ಅಂತ ಕೇಳತ್ತಾರೆ. ನ್ಯಾಯ ಇಲ್ಲ– ನೀತಿ ಇಲ್ಲ–“[೧೨] ಎನ್ನುವ ರುಜಾರಿಯ ಮಾತುಗಳು ಜನರ ಬದಲಾದ ಮನೋಭಾವಗಳಿಗೆ ಕನ್ನಡಿ ಹಿಡಿದಂತಿದೆ.

“ಕುಂಜಾಲು ಕಣಿವಯ ಕೆಂಪು ಹೂವು” ಕಾದಂಬರಿಯಲ್ಲಿ ಕುಂಜಾಲು ಕಣಿವೆಗೆ ಏಪದ ಉದ್ದೇಶಕ್ಕಾಗಿ ಅಲ್ಲಿಗೆ ಬಂದಿದ್ದ ತಂಡದವರು ನಿರ್ಮಲ ಮನಸ್ಸಿನ ಕುಂಜಾಲರಲ್ಲಿ ಅನೇಕ ಆಸೆ ಆಮಿಷಗಳನ್ನು ಒಡ್ಡಿ ವ್ಯವಸಾಯದ ಬದುಕಿಗಿಂತ ಪೇಟೆಯ ಬದುಕು ಸುಖಕರವೆಂಬ ಕಲ್ಪನೆಯನ್ನು ಅವರ ತಲೆಗೆ ತುಂಬಿದ್ದರು. ಪರಿಣಮವಾಗಿ ತಮ್ಮ ಜಮೀನುಗಳನ್ನು ಸಾಹುಕಾರರಿಗೆ ಮಾರಿ. ಅದನ್ನು ಕಳೆದುಕೊಂಡು ಇಲಾಕಾ ಕೆಲಸಕ್ಕೆ ಹೋಗುತ್ತಿದ್ದರು. ಹೀಗಾಗಿ ಅವರ ಬದುಕಿನಲ್ಲಿ ಉಂಟಾದ ಗಣನೀಯ ಬದಲಾವಣೆಯನ್ನು ಕಾಣುವುದರೊಂದಿಗೆ ಆಧುನಿಕತೆಯ ಆಕರ್ಷಣೆಯ ಎಷ್ಟು ಪ್ರಬಲ ಎನ್ನುವುದನ್ನು ಕಾಣಬಹುದಾಗಿದೆ.

‘ಪಿಷಾನಿಲ’ ಕಾದಂಬರಿಯಲ್ಲಿ ಕಾರ್ಖಾನೆಯ ಸ್ಥಾಪನೆಯಿಂದಾಗಿ ಒಂದು ಶಾಂತವಾಗಿದ್ದ ಪ್ರದೇಶದಲ್ಲಿ ಉಂಟಾದ ಸ್ಥಿತ್ಯಂತರಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಜನರ ಮನೋಭಾವನೆ ಆರ್ಥಿಕ ಹಿನ್ನೆಲೆಯಲ್ಲಿ ಹೇಗೆ ಬದಲಾಗುತ್ತದೆ ಎನ್ನವುದರ ಸ್ಪಷ್ಟ ಚಿತ್ರಣ ಇಲ್ಲಿದೆ. ಒಂದು ಇಡೀ ಸಮುದಾಯದ ಮೇಲೆ ಇದು ಹೇಗೆ ಪರಿಣಾಮ ಬೀರಿ ಶಾಂತ ಜೀವನವನ್ನು ಕದಡಿ, ಅಲ್ಪಕಾಲ ಸುಖದ ಭ್ರಾಮಿಕ ಜಗತ್ತನ್ನು  ಸೃಷ್ಟಿಸಿ, ಕೊನೆಗೆ ಎಲ್ಲವನ್ನೂ ನಾಶಪಡಿಸುತ್ತದೆ. ಎಂಬುದನ್ನು ಇಲ್ಲಿ ಕಾಣಬಹುದಾಗಿದೆ.

ಕಾರ್ಖಾನೆಯ ಸ್ಥಾಪನೆಗಾಗಿ ಅಲ್ಲಿನ ಪ್ರತಿಷ್ಠಿತರಾದ ಶಿವರಾಮಯ್ಯ ಹಾಗೂ ರಾಮಕೃಷ್ಣಯ್ಯನವರ ಬಂಜರು ಭೂಮಿಯನ್ನು ಕೊಳ್ಳುವುದೆಂಬ ಒಪ್ಪಂದವಾಗಿದ್ದರೂ. ಶಿವರಾಮಯ್ಯನ ಭಾವಮೈದ ವೀರಭದ್ರ ಶಿವರಾಮಯ್ಯನವರದನ್ನಷ್ಟೇ ವಿಕ್ರಯಿಸುವ ಮಸಲತ್ತು ಮಾಡುತ್ತಾನೆ. ಅದಕ್ಕಾಗಿ ಆತ ರಾಮಕೃಷ್ಣಯ್ಯನವರಿಗೆ ಜಮೀನು ಭೋಗ್ಯ ಹಾಕಿದ ಮನುಷ್ಯನನ್ನು ಹುಡುಕಿ, ಆತ ಸತ್ತುಹೋಗಿರಲಾಗಿ ಆತನ ಕುಡುಕ ಮಗನನ್ನು ಹುಡುಕಿ. ಅರ್ಜಿ ಬರೆದು ಆತನಿಂದ ಹೆಬ್ಬೆಟ್ಟು ಒತ್ತಿಸಿ, ಉದ್ಯಮದ ಎಂ.ಡಿ.ಗೆ ಕಳುಹಿಸುತ್ತಾನೆ. ರಾಮಕೃಷ್ಣಯ್ಯನವರ ಜಮೀನು ತಕರಾರಿನದು ಎಂಬ ಭಾವನೆ ಬರುವಂತೆ ಮಾಡಿ ಶಿವರಾಮಯ್ಯನವರದ್ದೇ ನಲವತ್ತು ಎಕರೆ

ಜಮೀನನ್ನು ಕೊಳ್ಳುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಹಣಕ್ಕಾಗಿ ಮನುಷ್ಯ ಹೇಗೆ ಎಂತಹ ಹೇಯ ಕೆಲಸ ಮಾಡಲು ಹೇಸುವುದಿಲ್ಲ ಹೇಗೆ ಸ್ವಾರ್ಥಪರನಾಗಿ ವರ್ತಿಸುತ್ತಾನೆ ಎನ್ನುವುದು ವೀರಭದ್ರನ ವರ್ತನೆಯಿಂದ ತಿಳಿದುಬರುತ್ತದೆ.

ಕಾರ್ಖಾನೆಯ ನಿರ್ಮಾಣ ಕಾರ್ಯ ಪ್ರಾರಂಭವಾಗುತ್ತಿದ್ದಂತೆ ಮತ್ತೊಂದು ಕಡೆ ಮನೆಗಳು, ಪೇಟೆ ಬೀದಿ, ಅಂಚೆ ಕಛೇರಿ, ಶಾಲೆ ಎಂದು ಪ್ರತ್ಯೇಕವಾಗಿ ಎಲ್ಲವೂ ತಲೆ ಎತ್ತತೊಡಗಿದವು. ಶಾಂತಿಗೆರೆಯಿಂದ ಕಾರ್ಖಾನೆಯವರೆಗಿನ ರಸ್ತೆಯಲ್ಲಿ ಅಂಗಡಿ ಹೋಟೆಲ್ಲುಗಳು ತೆರೆದುಕೊಂಡವು. ಗೋಪಾಲನದು ಒಂದು ಸಣ್ಣ ಹೋಟೇಲಿದ್ದು "ಅದು ಹೊಟ್ಟೆ ಹೊರೆಯಲು ಅಲ್ಲ ಚಿಲ್ಲರೆ ಕಾಸಿಗೆ"[73] ಎಂಬಂತಿತ್ತು. "ಹೊಲ ಗದ್ದೇನ ಮನೆ ಸೈಟ್ ಮಾಡಿಸಿಕೊಳ್ಳಲು ಬಂಕ, ಲಿಂಗ, ರಾಮಯ್ಯ, ಹರಿಯ, ಸುದೇವ ಎಲ್ಲಾ ಓಡಾಡುತ್ತಿದ್ದಾರೆ. ಕೆಲವರು ಸೈಟ್ ಮಾಡಿ ಮಾರುತ್ತಿದ್ದಾರೆ. ನಿನಗೊಂದು ಜಾಗ ಬೇಕ ಹೇಳು" ಎಂಬ ಹೊಸಮನೆ ರಾಮಚಂದ್ರಪ್ಪನ ಪ್ರೇರಣೆಯ ಮೇರೆಗೆ ತನ್ನ ಹೋಟೆಲ್ ಉದ್ಯಮವನ್ನು ವಿಸ್ತರಿಸಿ, ಹೆಚ್ಚು ಹಣಮಾಡಿ ಶ್ರೀಮಂತನಾಗಲು ಬಯಸಿ, ಸೈಟ್ ಮಾಡುವ ವಿಚಾರಕ್ಕೆ ಹರಿಯನಿಗೆ ಎರಡೂವರೆ ಸಾವಿರ ಹಣ ಕೊಟ್ಟು ಕಾದು ವಿಚಾರಿಸಲಾಗಿ, ಅವನು ಬೇರೆಯವರಿಗೆ ಐದು ಸಾವಿರಕ್ಕೆ ಮಾರಿ ತಲೆ ಮರೆಸಿಕೊಂಡಿರುವ ವಿಚಾರ ತಿಳಿದು ಬರಿಗೈಯಾಗಬೇಕಾಗುತ್ತದೆ. ಎರಡೂ ಕಡೆ ಲಾಭ ಪಡೆಯುವಂತಹ ಹರಿಯನಂತಹವರು ನಮ್ಮ ಸಮಾಜದಲ್ಲಿ ಬಹಳಷ್ಟು ಮಂದಿ ಇದ್ದು ಜನರನ್ನು ವಂಚಿಸುತ್ತಿರುವುದನ್ನು ಕಾಣಬಹುದಾಗಿದೆ. ಹಣದಾಸೆಗೆ ಒಳಗಾದ ಜನ ಹೊಲ ಗದ್ದೆಗಳನ್ನು ಸೈಟುಗಳಾಗಿ ಪರಿವರ್ತಿಸುತ್ತಿದರು. ಪರಿಣಾಮವಾಗಿ ಅಂಗಡಿ ಮುಂಗಟ್ಟುಗಳು, ಮಳಿಗೆಗಳು ಹೊಸ ರಸ್ತೆಗಳು, ಅಲ್ಲಲ್ಲಿ ಅರ್ಧ ಎದ್ದ ಗೋಡೆಗಳು, ಕಡೆಗೆ ಬೆಳೆ ಬೆಳೆಯಲು ಯೋಗ್ಯವಾದ ಭೂಮಿಗಳು ಸಹ ರಸ್ತೆಗಳಾಗಿ ಮಾರ್ಪಾಡಾಗಿರುತ್ತದೆ. ಇಲ್ಲಿ ಗ್ರಾಮ್ಯ ವಾತಾವರಣದಿಂದ ನಗರೀಕರಣಕ್ಕೆ ತ್ವರಿತವಾಗಿ ಸಜ್ಜಾಗುತ್ತಿರುವುದರ ಚಿತ್ರಣ ಇಲ್ಲಿದೆ. ಫ್ಯಾಕ್ಟರಿ ನಿವೇಶನದಿಂದ ಸಾಕಷ್ಟು ದೂರವಿದ್ದು, ನಾಲ್ಕೈದು ಎಕರೆ ಜಮೀನು ಇರುವವರಿಗೆ ಯಾವುದೇ ರೀತಿಯ ಬಿಸಿ ತಟ್ಟಲಿಲ್ಲ. ಆದರೆ ನಾಲ್ಕೈದು ಗುಂಟೆ ಇರುವವರು, ಕೂಲಿ ಮಾಡಿ ಬದುಕುವವರು ಕೂಡಲೆ ಹೊಸ ಕೆಲಸದತ್ತ ಆಕರ್ಷಿಸಲ್ಪಟ್ಟರು. ವ್ಯವಸಾಯದ ಬಗ್ಗೆ ಜಿಗುಪ್ಸೆ ತಾತ್ಸಾರ ಉಳ್ಳವರು ಫ್ಯಾಕ್ಟರಿ ಕೆಲಸವೆಂದು ಮುಗಿಬಿದ್ದರು. ಅಲ್ಲಿ ಬದಲಾಗುತ್ತಿರುವ ಜನರ ಮನೋಭಾವನೆಯನ್ನು, ನಡವಳಿಕೆಯನ್ನು ಸ್ಪಷ್ಟವಾಗಿ ಗುರುತಿಸಬಹುದು.

ವ್ಯವಸಾಯ ಕಷ್ಟದ ಕೆಲಸ, ಮರ್ಯಾದೆಯೂ ಇಲ್ಲ, ಕಂಟ್ರಾಕ್ಟು, ಅಂಗಡಿ, ಹೋಟೇಲು ಇವುಗಳಲ್ಲಿ ಕುಳಿತು ಹಣ ಎಣಿಸುವುದು, ಇಂತಹ ಅವಕಾಶಗಳಿರುವಾಗ ತಾನೇಕೆ ವ್ಯವಸಾಯಕ್ಕೆ ಜೋತು ಬೀಳಬೇಕು ಎಂಬುದು ರಾಮಚಂದ್ರಪ್ಪನ ವಿಚಾರಧಾರೆ.

ಫ್ಯಾಕ್ಟರಿಯ ಕೆಲಸ ತ್ವರಿತಗತಿಯಲ್ಲಿ ಸಾಗುತ್ತಿದ್ದಂತೆ ಗುಡಿಕಟ್ಟೆ ಜವರಯ್ಯ ಕೂಲಿಯಾಳುಗಳನ್ನು ಪಕ್ಕದ ಹಳ್ಳಿಗಳಿಂದ ಕರೆದುಕೊಂಡು ಬಂದು ಕೆಲಸ ಮಾಡಿಸುತ್ತಿರುತ್ತಾನೆ. ನಲವತ್ತು ಜನರಿಂದ ಕೆಲಸ ಮಾಡಿಸಿ ಐವತ್ತು ಜನರ ಲೆಕ್ಕ ತೋರಿಸಿ ಬಹಳ ಸುಲಭವಾಗಿ ಹಣ ಸಂಪಾದಿಸುತ್ತಿರುತ್ತಾನೆ. ಹೀಗಾಗಿ ಶ್ರಮವಿಲ್ಲದೆ ಬರುವ ಆದಾಯದ ಮೇಲೆ ರಾಮಚಂದ್ರಪ್ಪನ ಕಣ್ಣು. ಆದರೆ ಆತನ ಹೆಂಡತಿಗೆ ಶ್ರಮದ ದುಡಿಮೆಯ ಮೇಲೆಯೇ ಅಪಾರವಾದ ನಂಬಿಕೆ. ಗುಡಿಕಟ್ಟೆ ಜವರಣ್ಣ ವಾರಕ್ಕೆ ಸಾವಿರ ದುಡಿಯುತ್ತಾನೆ. ಡಿಪಾಜಿಟ್ ಇಡಲು ಎರಡು ಸಾವಿರ ಕೊಡುವಂತೆ ಹೆಂಡತಿಯ ಸಂಪಾದನೆಯಲ್ಲಿ ಶೋಕಿ ಮಾಡಿಸಿಕೊಂಡು ತಿರುಗಾಡುತ್ತಿರುವ ಗಂಡನ ಬಗ್ಗೆ ಅವಳಿಗಿದ್ದ ತಾತ್ಸಾರ ಈ ಮಾತುಗಳಲ್ಲಿ ವ್ಯಕ್ತವಾಗುತ್ತದೆ. “ಮಳೇಲಿ ನೆನೀಲ್ಲಿಲ್ಲ- ಮೂಟೆ ಹೊರಲಿಲ್ಲ ಹಣ ಕೇಳಾಕೆ ಬಂದ್ರ? ಎಲ್ಲಿದೆ ಎರಡು ಸಾವಿರ ? ನಾನೊಂದು ಕಾಸು ಕೊಡೋದಿಲ್ಲ—ಕೂಲಿಯಾಳುಗಳನ್ನು ಕಟ್ಟಿಕೊಂಡು ಹೊಲದಲ್ಲಿ ದುಡಿಯೋಕೆ ನಾನು—ಎರಡು ಸಾವಿರ ತಕ್ಕೊಂಡು ಹೋಗಿ ಕಟ್ಟಲಿಕ್ಕೆ ನೀವು-- ನೀವು ವಾರಕ್ಕೆ ಸಾವಿರ ತರೋದು ಬೇಡ-- ನಾನು ಈ ಎರಡು ಸಾವಿರ ಕೊಡೋದು ಇಲ್ಲ. ಹೊಸ ಸೀರೆ ಬರುತ್ತೆ ಅಂತ ಹಳೇ ಸೀರೀನ ಒಲೆಗೆ ಹಾಕ್ಲ--?” ಎಂದು ಪ್ರತಿಕ್ರಿಯಿಸುತ್ತಾಳೆ.

ಶಾಂತಿಗೆರೆ ಬಂದ ಬದಲಾವಣೆಗಳಲ್ಲಿ ಸುದೇವ ಲಾರಿ ಮಾಲೀಕನಾದುದು ಒಂದು. ಚಿಕ್ಕಂದಿನಲ್ಲಿ ಅಪ್ಪ ಒದೆ ಕೊಟ್ಟನೆಂದು ಯಾವುದೋ ಗ್ಯಾರೇಜು ಸೇರಿಕೊಳ್ಳುತ್ತಾನೆ.ದಿನ ಲಾರಿ ತೊಳೆಯುತ್ತಿರುವಾಗ ಅಮರಿಕೊಂಡ ಆಸೆ ಕೊನೆಗೆ ಚಂದ್ರಗುತ್ತಿ ಸಿದ್ದಪ್ಪನ ಮಗಳನ್ನು ಮದುವೆಯಾದಾಗ ಬಲಿಯಿತು. ಸಿದ್ದಪ್ಪ ಲಾರಿ ಮಾಲೀಕನಾದ್ದುದರಿಂದ ಡ್ರೈವಿಂಗ್ ಕಲಿತಾಗ, ತಾನು ಒಂದು ಲಾರಿ ಇಟ್ಟುಕೊಂಡು ಹಣ ಮಾಡಬೇಕು, ಸ್ಟೈಲ್‌ನಿಂದ ಡ್ರೈವ್ ಮಾಡಬೇಕು ಎಂಬ ಆಸೆ ತೀವ್ರವಾಗುತ್ತಾ ಹೋಗಿ, ಹೊಲ ಮಾರಿ ಬಂದ ಹಣದಿಂದ ಲಾರಿ ಮಾಲೀಕನಾದ.

ಶಾಂತಿಗೆರೆಯಲ್ಲಿ ತೀವ್ರಗತಿಯಲ್ಲಾಗುತ್ತಿದ್ದ ಬದಲಾವಣೆಗಳನ್ನು ನೋಡಲು ಬಂದ ಹಾಗೆರೆ ಚೆನ್ನಬಸಪ್ಪನಿಗೆ ರಾಮಚಂದ್ರಪ್ಪನ ಭೇಟಿಯಾಗಿ ಇಬ್ಬರೂ ಸಿನಿಮಾ ಟಾಕೀಸು ಹಾಕುವ ವಿಚಾರ ಮಾಡಲಾಗಿ, ಅವರಿಗೆ ಅಮಲೂರು ಉಕ್ಕಡದ ಬಳಿ ಪಾಳು ಜಮೀನು ಸಿಗುತ್ತದೆ. ಕಡೆಗೆ ರಾಮಚಂದ್ರಪ್ಪನ ಜಮೀನು ಅಡವು ಹಾಕಿ, ಹಣ ಪಡೆದುಕೊಂಡು ಪಾರ್ಟನರ್ ಆಗಿ ರಾಮೇಶ್ವರ ಟೂರಿಂಗ್ ಟಾಕೀಸನ್ನು ಪ್ರಾರಂಭಿಸುತ್ತಾನೆ.

ಶಾಂತಿಗೆರೆ ಶಾಂತಿನಗರವಾಯಿತು. ಮಳೆಯೂ ಬಂದಿತು ಆದರೆ ವ್ಯವಸಾಯ ಮಾಡುವವರಿಗೆ ಹೊಲದಲ್ಲಿ ಕೆಲಸ ಮಾಡಲು ಜನರೇ ಸಿಗದಂತಹ ಪರಿಸ್ಥಿತಿ ಉದ್ಭವಿಸಿತು. ಹಿಂದೆ ಕೃಷಿ ಕೆಲಸಕ್ಕೆ ಬರುತ್ತಿದ್ದವರೆಲ್ಲಾ ಫ್ಯಾಕ್ಟರಿ ಕೆಲಸಕ್ಕೆ ಹೋಗುತ್ತಿದ್ದರು. ಕೆಲ ಹಳ್ಳಿಗಳಿಗೆ ಜನರನ್ನು ಕರೆತರಲು ಬಸ್ಸುಗಳು ಹೋಗುತ್ತಿದ್ದು, ಕೂಲಿಕಾರರಿಗೆ ಸಮವಸ್ತ್ರ, ಚಪ್ಪಲಿ, ಫ್ಯಾಕ್ಟರಿಯೊಳಗೆ ಕೈ ಮುಖಕ್ಕೆ ಹಾಕಿಕೊಳ್ಳಲು ಕವಚಗಳು, ಕೈ ತುಂಬಾ ಸಂಬಳ, ವಾರದ ರಜೆ, ಸಂಜೆ ಮತ್ತೆ ಬಸ್ಸಿನಲ್ಲಿ ವಾಪಸ್ಸು ಮುಂತಾದ ಸೌಲಭ್ಯಗಳು ದೊರಕಿರಬೇಕಾದರೆ ಕೆಸರಿನಲ್ಲಿ ದುಡಿಯಲು ಯಾರು ತಾನೇ ಬರುತ್ತಾರೆ. ಹೆಚ್ಚು ಜಮೀನು ಇರುವವರು ಕೂಲಿಕಾರರು ಸಿಗದ ಕಾರಣ ಹಲವು ಎಕರೆಗಳನ್ನು ಬೀಳು ಬಿಡಬೇಕಾಯಿತು. ಗೊಬ್ಬರದ ಕಾರ್ಖಾನೆಯ ಮಗ್ಗುಲಲ್ಲೇ ಕೀಟನಾಶಕದ ಕಾರ್ಖಾನೆ ತಲೆ ಎತ್ತಿದ ಕೂಡಲೇ ಅದರ ಆಸುಪಾಸಿನಲ್ಲಿದ್ದ ಕೆಲ ರೈತರು ಹೊಲಗಳನ್ನು ಮಾರ ತೊಡಗಿದರು. ಇಲ್ಲಿ ಹೇಗೆ ಕೈಗಾರಿಕೋದ್ಯಮವು ನೆಲ, ಜಲ, ವಾಯುಮಾಲಿನ್ಯಕ್ಕೆ ಕಾರಣವಾಗುವುದಲ್ಲದೇ ಜನರ ಬದುಕಿನ ರೀತಿ ರಿವಾಜುಗಳನ್ನು ಬದಲಿಸುತ್ತದೆ ಎಂಬುದನ್ನು ಕಾಣಬಹುದು. ಹಣದ ಪ್ರವೇಶದಿಂದಾಗಿ ಜನ ಹೆಚ್ಚು ಹಣ ಮಾಡುವ ಆಕರ್ಷಣೆಗೆ ಒಳಗಾಗುವುದರೊಂದಿಗೆ, ಸ್ವಾರ್ಥ. ಸ್ವಜನ ಪಕ್ಷಪಾತ ಮುಂತಾದವು ಹುಟ್ಟಿಕೊಳ್ಳುವ ರೀತಿ ನಿಜಕ್ಕೂ ಅಚ್ಚರಿ ಹುಟ್ಟಿಸುವಂತಹದ್ದಾಗಿದೆ.

ಜನರ ಆರ್ಥಿಕ ಜೀವನದ ಮೇಲೆ ಇಷ್ಟೆಲ್ಲಾ ಪ್ರಭಾವ ಬೀರಿದ ಕಾರ್ಖಾನೆ ಉಗುಳಿದಂತಹ ವಿಷಾನಿಲವೇ ಅವರೆಲ್ಲರ ಸಾವಿಗೆ ಕಾರಣವಾಯಿತು ಎನ್ನುವುದು ಇಲ್ಲಿ ದುರಂತದ ಅಂಶ.

'ಚಿನ್ನದ ಮೊಟ್ಟೆ' ಕಾದಂಬರಿಯಲ್ಲಿ ಮನೆಯೊಂದನ್ನು ಕಟ್ಟಲು ಒಂದೊಂದೇ ವಸ್ತುವನ್ನು ಹೇಗೆ ಪಡೆದುಕೊಳ್ಳುತ್ತಾರೆ ಎಂಬುದನ್ನು ನೋಡಬಹುದು.

ಡಾ.ನೀಲಕಂಠನ ಮನೆ ನಿವೇಶನಕ್ಕಾಗಿ ಮೈಲಪ್ಪ ತನಗೆ ಮುಂದೆ ಬೇಕಾಗಬಹುದೆಂದು ಇಟ್ಟುಕೊಂಡಿದ್ದ ಖಾಲಿ ಜಾಗವನ್ನು ಹೆಚ್ಚು ಹಣ ಸಿಗುತ್ತದೆಂಬ ಕಾರಣಕ್ಕಾಗಿ ಮಾರುತ್ತಾನೆ. ಪಿತ್ರಾರ್ಜಿತವಾಗಿ ಬಂದಿದ್ದ ಮನೆಯನ್ನು ಕೆಡವಿ ಹೊಸ ಮನೆಯನ್ನು ಕಟ್ಟಲು ಯೋಚಿಸುತ್ತಾನೆ. ಆದರೆ ಎಂದೋ ಮನೆ ಬಿಟ್ಟು ಹೋಗಿದ್ದ ತಮ್ಮ ಮನೆ ಅರ್ಧ ಮುಗಿದಾಗ ಬರುತ್ತಾನೆ. ಪಾಲು ಪಡೆದ ಪರಿಣಾಮವಾಗಿ ಅವನು ಮನೆಯನ್ನು ಪೂರ್ಣಗೊಳಿಸಲು ಸಾಧ್ಯವಾಗದೆ ಅವನ ಮನೆ ಕಟ್ಟಿಸುವ ಇಚ್ಛೆ ಪೂರ್ಣವಾಗುವುದಿಲ್ಲ.

ಅದರಂತೆ ಮನೆ ಕಟ್ಟಲು ಬೇಕಾದ ನೀರನ್ನು ಕಡಿಮೆ ಬೆಲೆಗೆ ಪೂರೈಸಲು ವೇಲಾಯುಧನ್ ಪ್ರಯತ್ನಿಸುತ್ತಾನೆ. ಬಾವಿ ನಾರಾಯಣನ ಮನೆಯ ಹಿತ್ತಲಿನಲ್ಲಿದ್ದ ಬಳಸದೇ ಇದ್ದ ಬಾವಿಯ ನೀರನ್ನು ಬಳಸಿಕೊಳ್ಳಲು ತೀರ್ಮಾನಿಸುತ್ತಾನೆ. ನಾರಾಯಣನಿಗೆ ಸ್ವಲ್ಪ ಸ್ವಲ್ಪವೇ ಹಣವನ್ನು ಕೊಟ್ಟು, ಅವನನ್ನು ಪುಸಲಾಯಿಸುವ ಸಲುವಾಗಿ ಅವನಿಗೆ ಕುಡಿತದ ಅಭ್ಯಾಸವನ್ನು ಮಾಡಿಸುತ್ತಾನೆ. ಕುಡಿತಕ್ಕೆ ದಾಸನಾಗಿ, ಊರಿನ ಜನರ ಅವಹೇಳನಕ್ಕೆ ಗುರಿಯಾಗಿ, ಕುಡಿತಕ್ಕೆ ಹಣವಿಲ್ಲದ ನಾರಾಯಣ ಅದೆ ಬಾವಿಯಲ್ಲಿ ಬಿದ್ದು ಸಾಯುತ್ತಾನೆ. ಇದು ಅವನಿಗೆ ಸುಲಭದಲ್ಲಿ ದೊರೆತ ಹಣದ ಪರಿಣಾಮವಾಗಿದೆ.

ಹಾಗೆಯೇ ಹಳದಪ್ಪನ ಹೊಲದಲ್ಲಿದ್ದ ಬಂಡೆಯನ್ನು ಸಿಡಿಸಿ ಮನೆಗೆ ಬೇಕಾದ ಕಲ್ಲನ್ನು, ಸೈಜು ಕಲ್ಲನ್ನು, ಸುಲಭ ಬೆಲೆಗೆ ಪಡೆಯುವುದು ವೇಲಾಯುಧನ್‌ನ ಹಂಚಿಕೆ. ಬಂಡೆಯನ್ನು ಸಿಡಿಸಿದ ಪರಿಣಾಮವಾಗಿ ಬಂಡೆ ಇದ್ದ ಜಾಗದಲ್ಲಿ ಜಲ ಒಡೆದು ಹೊಲವೆಲ್ಲ ನೀರಿನಿಂದ ಆವೃತವಾಗಿ ವ್ಯವಸಾಯ ಮಾಡಲು ಸಾಧ್ಯವಾಗದೆ ಹೋಗುತ್ತದೆ. ಹಣದಾಸೆಗೆ ಒಳಗಾಗಿ ಬಂಗಾರದಂತಹ ಹೊಲವನ್ನು ಕಳೆದುಕೊಳ್ಳಬೇಕಾಗುತ್ತದೆ.

ಅದರಂತೆ ಸೋಮಣ್ಣ ಹಿತ್ತಲಿನಲ್ಲಿ ಬೆಳೆದಿದ್ದ ಮಜಬೂತಾದ ಮರವನ್ನು ಕಡಿಮೆ ಬೆಲೆಗೆ ಮಾರಿ ನಂತರ ತಾನೂ ಮೋಸ ಹೋದ ವಿಷಯ ತಿಳಿದು ಮಾನಸಿಕ ಅಸ್ವಸ್ಥತೆಗೆ ಒಳಗಾಗುತ್ತಾನೆ.

ಹೀಗೆ ವೇಲಾಯುಧನ್ ಒಂದೊಂದೇ ಸಾಮಗ್ರಿಗಳನ್ನು ಕಡಿಮೆ ಬೆಲೆಗೆ ಸಂಗ್ರಹಿಸಿಕೊಳ್ಳುವುದರ ಜೊತೆಗೆ ಜನರಿಗೆ ಹಣದಾಸೆಯನ್ನು ತೋರಿ ಅಲ್ಲಿನ ಶಾಂತ ಜೀವನವನ್ನು ನಾಶಪಡಿಸುವುದನ್ನು ನಾವಿಲ್ಲಿ ಕಾಣಬಹುದು.

ಹೀಗೆ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಡಿಸೋಜರವರ ಕೆಲವು ಕಾದಂಬರಿಗಳಲ್ಲಿ ಆರ್ಥಿಕ ಸ್ಥಿತ್ಯಂತರಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

**ಸಾಂಸ್ಕೃತಿಕ ಸ್ಥಿತ್ಯಂತರಗಳು**

ಒಂದು ಪ್ರದೇಶದಲ್ಲಿ ಒಟ್ಟಾಗಿ ಕೂಡಿ ಜೀವಿಸುವ ಜೀವನ ಕ್ರಮವೇ ಸಂಸ್ಕೃತಿ. ಆಚಾರ–ವಿಚಾರಗಳು, ನಡೆ–ನುಡಿಗಳು, ಸಂಪ್ರದಾಯ, ಪದ್ಧತಿಗಳು, ಅಭಿರುಚಿ, ಮನೋಧರ್ಮಗಳು ಸಂಸ್ಕೃತಿಯನ್ನು ಬಿಂಬಿಸುತ್ತವೆ. ಮನುಷ್ಯ ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳುವುದಕ್ಕೆ ನಿಸರ್ಗದೊಡನೆ ನಿರಂತರವಾಗಿ ಹೋರಾಡುತ್ತಲೇ ಬಂದಿದ್ದಾನೆ. ಈ ಹೋರಾಟ ಹೊಂದಾಣಿಕೆ ಫಲವೇ ಸಂಸ್ಕೃತಿಯಾಗಿದೆ. ಮಲೆನಾಡಿನ ಜನರ ಸೌಮ್ಯ ಸಂಸ್ಕೃತಿ ಹಾಗೆಯೇ ನಗರದ ನಾಗರೀಕ ಸಂಸ್ಕೃತಿಗಳ ನಡುವಿನ ಭಿನ್ನತೆಯನ್ನು ಡಿಸೋಜರ ಕಾದಂಬರಿಯಲ್ಲಿ ನೋಡಬಹುದು. ಹಿರಿಯರನ್ನು ಗೌರವಿಸುವುದು ಮುಂತಾದ ನೈತಿಕ ಮೌಲ್ಯಗಳು ನಗರದ ಹಾಯ್ ಬಾಯ್ ಸಂಸ್ಕೃತಿಯಲ್ಲಿ ಇಂದು ಮಾನ್ಯತೆ ಪಡೆದಿಲ್ಲ. ವ್ಯಕ್ತಿ ನೆಲೆಯಲ್ಲಿ ತನ್ನ ಸ್ವಾರ್ಥವನ್ನು ನೋಡುವುದರಿಂದ ಅವರಿಗೆ ತಲೆಮಾರಿನ ಬೆಸುಗೆ ಮುಖ್ಯವಾಗುವುದಿಲ್ಲ. ಹಿರಿಯರು ಉಳಿಸಿ ಬೆಳೆಸಿಕೊಂಡು ಬಂದ ಸಂಸ್ಕಾರಗಳು, ಸಂಸ್ಕೃತಿಗಳು ಮುಖ್ಯವಾಗುವುದಿಲ್ಲ. ಆ ಅಂಶಗಳು ಸಾಂಸ್ಕೃತಿಕ ಸ್ಥಿತ್ಯಂತರ ಉಂಟಾಗಲು ಕಾರಣವಾಗಿದೆ.

'ಮುಳುಗಡೆ' ಮಾಡಿರುವ ಸಾಂಸ್ಕೃತಿಕ ಸ್ಥಿತ್ಯಂತರಗಳು ಹಲವಾರು. ಒಂದು ಪರಂಪರೆ, ಜೀವನ ಕ್ರಮ, ಮೌಲ್ಯ, ಸಂಸ್ಕೃತಿ ಎಲ್ಲವೂ ಬದಲಾವಣೆಯಾಗಲೂ ಕಾರಣವಾಗಿದೆ. ಮನುಷ್ಯ ಸಾಮಾನ್ಯವಾಗಿ ತಾನೂ ಬೆಳೆದ ಪರಿಸರವನ್ನು ಬಿಟ್ಟು ಹೋಗುವುದಕ್ಕೆ ಮನಸ್ಸು ಬರುವುದಿಲ್ಲ. ಆದರೆ ಅಣೆಕಟ್ಟು ನಿರ್ಮಾಣದಿಂದ ಸರ್ಕಾರ ಸೂಚಿಸಿದ ಜಾಗಕ್ಕೆ ಮನಸ್ಸಿಲ್ಲದ ಮನಸ್ಸಿನಲ್ಲಿ ಹೋಗಲೇಬೇಕಾಗುತ್ತದೆ. ಒಲ್ಲದ ಮನಸ್ಸಿನಿಂದ ಹೋದ ಜನ ಎಷ್ಟರ ಮಟ್ಟಿಗೂ ಸಂತೋಷದಿಂದ ಬದುಕಲು ಅಸಾಧ್ಯವಾಗುತ್ತದೆ.

“ಎಷ್ಟೋ ತಲೆಮಾರುಗಳಿಂದ ಕೃಷಿಯನ್ನೆ ಆಧಾರವಾಗಿಟ್ಟುಕೊಂಡು ಸಾಂಪ್ರದಾಯಿಕ ರೀತಿಯಲ್ಲಿ ಜೀವನ ಕಳೆಯುತ್ತಾ ಬಂದ ಜನಾಂಗವೊಂದರ ನಡುವೆ ತಲೆ ಎತ್ತಿದ ಡ್ಯಾಂ. ಅಲ್ಲಿಯ ಜೀವನವನ್ನೆ ಥಟ್ಟೆಂದು ಎರಡು ಭಾಗಗಳನ್ನಾಗಿ ಒಂಗಡಿಸಿ ಬಿಡುತ್ತದೆ. ಮಲೆತು ನಿಂತ ನೀರಿನ ಆಚೆಗಿನ ಪ್ರಪಂಚ ಒಂದು, ಈಚೆಗಿನ ಪ್ರಪಂಚ ಇನ್ನೊಂದು ಪರಿಹಾರ ಪಡೆದು. ಬೇರೊಂದು ರೀತಿಯ ಜೀವನ ನಡೆಸಲು ನದಿ ದಾಟಿ ಈಚೆ ಬಂದವರಿಗೆ ಎದುರಾಗುವುದು, ಡ್ಯಾಂ ಸುತ್ತ ಬೆಳೆದ ಪಟ್ಟಣ, ಡ್ಯಾಂ ಕಟ್ಟಲು ಬಂದ ಅತ್ಯಾಧುನಿಕವಾದ ಬಾರಿ ಯಂತ್ರಗಳೊಡನೆ ಸಹಜೀವನ ನಡೆಸಲು ಇವರ ಜೀವನದಲ್ಲಿ ರಸ್ತೆಗಳಿವೆ, ದೀಪಗಳಿವೆ, ಇತರ ಸೌಕರ್ಯಗಳಿವೆ. ಕೃಷಿಕ ಸಮಾಜಕ್ಕೆ ಭಿನ್ನವಾದ ವಿನಿಮಯ ಕ್ರಮವಿದೆ. ಅನ್ನಲಡ್ಡಿಯಿಲ್ಲದ ಸಿಕ್ಕಿರುವ ಜೀವನ ಶೈಲಿ ಅವರನ್ನು ಸ್ವಾಗತಿಸುತ್ತ ಥಟ್ಟನೆ ಮತ್ತೊಂದು ಕಾಲಘಟ್ಟಕ್ಕೆ ಜಿಗಿದಂತೆ ಅನ್ನಿಸಿದರೆ ಆಶ್ಚರ್ಯವಲ್ಲ”. [೧೪]

“ಮುಳುಗಡೆ” ಕಾದಂಬರಿಯಲ್ಲಿ ಅನೇಕ ಪ್ರವಾಸಿ ತಾಣಗಳು, ಹಳೆಯ ಶಿಲಾಶಾಸನಗಳು ದೇವಾಲಯಗಳು ನಾಶವಾಗುವುದರಿಂದ ಒಂದು ಪ್ರಾಚೀನ ಸಂಸ್ಕೃತಿಯೇ ಅಳಿದಂತಾಗುತ್ತದೆ. ಇದಲ್ಲದೆ ಅದ್ಭುತವಾದ ಕಲೆಯ ಪ್ರಪಂಚ ನಾಶವಾಗುತ್ತದೆ. ಮುಳುಗಡೆ ಕೆರೆಕೋಡಿ ಮಹಾಬಲಯ್ಯನವರ ಮಾತಿನಲ್ಲಿ ಈ ಅಂಶವನ್ನು ಗುರುತಿಸಬಹುದು. “ಮುಳುಗಡೆ ಅಂದರೆ ಊರು ಮಾತ್ರ ಅಲ್ಲ.... ಎಲ್ಲ ಮುಳುಗಡೆ ಆಗುತ್ತೆ..... ಈಗ ನಮ್ಮ ಯಕ್ಷಗಾನ ಮಂಡಳಿ ಕೂಡ..... ಇಲ್ಲೆ ಸುತ್ತಮುತ್ತ ಇದ್ದ ಹತ್ತು ಜನ ಕಲಾವಿದರನ್ನು ಸೇರಿಸಿಕೊಂಡು ಆಟ ಮಾಡ್ತಿದ್ವಿ, ಈಗ ಅವರೆಲ್ಲ ಒಂದೊಂದು ದಿಕ್ಕಿಗೆ ಹೊರಟು ಹೋಗುತ್ತಾರೆ. ಇನ್ನು ಆಟ ಆಡೋದು ಹ್ಯಾಗೆ? ಈ ಭುಜಕೀರ್ತಿ. ಕಂಚಿದಾಮ, ಗೆಜ್ಜೆ, ತಾಳ, ಚಂಡೇನೆಲ್ಲ ಶರಾವತಿಗೆ ಹಾಕಿ ಕೈ ಮುಗಿಯೋದೆ ಸೈ....”[೧೫] ಎನ್ನುತ್ತಾನೆ.

‘ಒಡ್ಡು’ ಕಾದಂಬರಿಯಲ್ಲಿ ಆಧುನಿಕತೆಯು ಪ್ರಭಾವ ಬೀರಿದಂತೆ ಹನುಮಂತಪ್ಪನ ಕುಟುಂಬದಲ್ಲಾಗುವ ಪರಿಣಾಮವನ್ನು ಕಾಣಬಹುದು. ನಗರ ಸಂಸ್ಕೃತಿಯ ಸೆಳೆತವು ಅವನ ಮಕ್ಕಳನ್ನು ತನ್ನೆಡೆಗಡೆ ಸೆಳೆದುಕೊಳ್ಳುತ್ತದೆ.

"ಈ ನೆಲ ಒಳ್ಳೇದು ಎಂಥ ಪರಿಸ್ಥಿತಿ ಬಂದರೂ ಈ ಹೊಲ ಬಿಡಬೇಡ"[72] ಎಂಬ ತಂದೆಯ ಮಾತನ್ನು ನಂಬಿದ ಹನುಮಂತಪ್ಪ ಅದನ್ನೇ ಪಾಲಿಸಿದ. ಆದರೆ ಕ್ರಮೇಣ ಮುಳುಗಡೆ ಆಗಿ ಊರು ದ್ವೀಪವಾದಂತೆ ತನ್ನ ಆಪ್ತರಿಂದ ದೂರವಾಗುತ್ತಾನೆ. ಆಗ ತನಗೂ ಈ ಊರು ಬಿಟ್ಟು ಹೋಗಬೇಕಿತ್ತು ಎಂಬ ಮನಸ್ಸಾಗುತ್ತದೆ. ಕಡಿದು ಹೋದ ಸಂಬಂಧವನ್ನು, ಸಂಪರ್ಕವನ್ನು ಮರು ಜೋಡಿಸುವ ಪ್ರಯತ್ನ ಹನುಮಂತಪ್ಪನದು. ಆದರೆ ಅವನ ಸಂಬಂಧ ಯಾರಿಗೂ ಬೇಡವಾಗುತ್ತದೆ. ಯಾರಿಗೂ ಹಳೆಯ ಹನುಮಂತಪ್ಪನ ಪ್ರಪಂಚ ಇಷ್ಟವಾಗುವುದಿಲ್ಲ. ಮಗ ಇವನ್ನು ಧಿಕ್ಕರಿಸುತ್ತಾನೆ. ಮಗ, ಸೊಸೆ ದೂರವಾಗುತ್ತಾರೆ. ಹನುಮಂತಪ್ಪನ ನೋವಿನ ಆಳ ಹೆಚ್ಚಾಗುತ್ತದೆ. ಆದರೆ ಬದಲಾವಣೆಯನ್ನು ಎದುರಿಸಿ ಊರವರು ಯಶಸ್ವಿಯಾಗುತ್ತಾರೆ. ಆಧುನಿಕ ಬದುಕಿನ ಎಲ್ಲಾ ಸೌಲಭ್ಯಗಳನ್ನು ಹೊಂದಿ ಸುಖವಾಗಿ ಬಾಳತೊಡಗುತ್ತಾರೆ.

ಮಗನೇ ಆದ ಬಲರಾಮ ಮದುವೆಗಾಗಿ ಪೇಟೆ ಸೇರಿದ. ಎರಡನೇ ಮಗ ಸಿದ್ದರಾಮ ಮದುವೆಯಾಗಿ ಮಾವನ ಮನೆ ಸೇರಿದ. ಕೊನೆಯ ಸಣ್ಣರಾಮನನ್ನು 'ನದಿಯಾಚೆ ದಾಟಿಕೊಳ್ಳುವ' ಯತ್ನದವನೇ–ತಂದೆಯೊಡನೆ ಊರಲ್ಲಿ ಉಳಿಯುವ ಹಾಗೂ ದಾಟಿಕೊಳ್ಳುವ ಆಕರ್ಷಣೆಯ ಇಬ್ಬಂದಿ ಸೆಳೆತದಲ್ಲಿ ನುಗ್ಗಾಗಿ ಅವನು ತನ್ನ ಜೀವನವನ್ನೇ ಕಳೆದುಕೊಳ್ಳುತ್ತಾನೆ. ಮೌಲ್ಯಗಳ ಬಗ್ಗೆ ತಲೆಕೆಡಿಸಿಕೊಳ್ಳದವರೆಲ್ಲಾ ಆರಾಮದ ಬದುಕನ್ನು ಅಪ್ಪಿಕೊಂಡರೆ, ತನ್ನ ನಂಬಿಕೆಗಳಿಗೆ, ಕೆಲವೊಂದು ಮೌಲ್ಯಗಳಿಗೆ, ಹುಟ್ಟಿದ ನೆಲದ ಬದುಕಿಗೆ ಬದ್ದನಾಗಿ ಉಳಿಯ ಬಯಸಿದ ಹನುಮಂತಪ್ಪ ಎಲ್ಲರಿಂದಲೂ ದೂರವಾಗುತ್ತಾ, ಒಂಟಿಯಾಗುತ್ತಾ ಹೋಗುತ್ತಾನೆ. ಕೊನೆಗೆ ಬದುಕಿಗೆ ಆಸರೆಯಾಗಿ ಉಳಿದಿದ್ದ ಏಕಮಾತ್ರ ಕೊಂಡಿ ಪತ್ನಿ ಲಿಂಗಮ್ಮನೂ ಪರಿಸ್ಥಿತಿಯ ಕ್ರೌರ್ಯಕ್ಕೆ ಬಲಿಯಾದಾಗ ಹನುಮಂತಪ್ಪ ತಲೆಕೂದಲು ಕಿತ್ತುಕೊಳ್ಳುವ, ಮುಷ್ಟಿಕಟ್ಟಿ ನೆಲಕ್ಕೆ ಗುದ್ದುವ, ಎದೆ ಬಡಿದುಕೊಳ್ಳುವ ಬೇರೊಬ್ಬ ಹನುಮಂತಪ್ಪನೇ ಆಗುತ್ತಾನೆ. ಕೊನೆಗೂ ಪರಿಹಾರ ಧನವನ್ನು ಹಿಡಿದುಕೊಂಡು ಬಂದ ಫರ್ನಾಂಡೀಸ್‌ಗೆ ನೇತಾಡುವ ಹನುಮಂತಪ್ಪ ಹೆಣವಾಗಿ ಕಾಣಿಸುವ ಮೂಲಕ ಇಡಿಯ ಸಮಸ್ಯೆಯ ಕಠೋರ ವಾಸ್ತವದ ವಿರಾಟ್ ದರ್ಶನವಾಗುತ್ತದೆ".

ನಗರದ ನಾಗರೀಕ ಸಂಸ್ಕೃತಿಗಳ ನಡುವಿನ ಭಿನ್ನತೆಯನ್ನು ಅವರ 'ಕುಂಜಾಲು ಕಣಿವೆಯ ಕೆಂಪು ಹೂವು' ಕಾದಂಬರಿ ಸ್ಪಷ್ಟವಾಗಿ ಚಿತ್ರಿಸುತ್ತದೆ. ಜೊತೆಗೆ ಗ್ರಾಮ್ಯ ಸಂಸ್ಕೃತಿಯು ನಗರದ

ನಾಗರೀಕ ಸಂಸ್ಕೃತಿಯ ಪ್ರಭಾವಕ್ಕೆ ಸಿಕ್ಕಿ ಹೇಗೆ ನಶಿಸಿ ಹೋಗುತ್ತದೆ ಎಂಬುದನ್ನು ನಿರೂಪಿಸುತ್ತದೆ. ಕಾದಂಬರಿ ಪ್ರಾರಂಭವಾಗುವುದೇ ನಗರದ ಯಾಂತ್ರಿಕೃತ ಬದುಕಿನ ನಿರೂಪಣೆಯೊಂದಿಗೆ, ಕಥಾನಾಯಕನ ಬದುಕಿನಲ್ಲಿ ಅನೇಕ ಬದಲಾವಣೆಗಳಾಗಿದ್ದರೂ ಅವನ ಮನಸ್ಸಿಗೆ ಯಾವುದೇ ರೀತಿಯ ಸಂತೋಷವಾಗಲೀ ಮುದವಾಗಲೀ ಇಲ್ಲದೇ ಹೋಗಿದೆ. ಅವನ ಮನೋಭಾವನೆ ಅವನ ಮಾತುಗಳಿಂದಲೇ ಹೊರಹೊಮ್ಮುತ್ತದೆ. ವರ್ಷಗಳಿಂದ ಈ ಜೀವನಕ್ಕೆ ಹೇಗೋ ಹೊಂದಿಕೊಂಡಿರುವ ನಾನು ಬಹಿರಂಗದಲ್ಲಿ ಸುಖಿಯಂತೆ ತೋರ್ಪಡಿಸಿಕೊಳ್ಳುತ್ತಾ ಅಂತರಂಗದಲ್ಲಿ ವ್ಯಾಕುಲತೆಯಿಂದ ಖಿನ್ನನಾಗುತ್ತಾ ಬದುಕು ನೂಕುತ್ತಿದ್ದೇನೆ" ಎಂಬ ಕಥಾನಾಯಕನ ಮಾತುಗಳಲ್ಲಿ ನಾಗರಿಕ ಬದುಕು ಹುಸಿ ಸಂಸ್ಕೃತಿಯಾದಾಗ ಯಾವುದೇ ಮಾತುಗಳು ಮನುಷ್ಯನಿಗೆ ಖುಷಿ ಕೊಡುವುದಿಲ್ಲ. ಶಿಷ್ಟ ಸಮಾಜದ ಹಾಯ್, ಬಾಯ್, ಕ್ಯಾಯಾರ್, ಘೋಲೋಶೇಟ್ –ಮುಂತಾದ ಮಾತುಗಳು ಹೃದಯಕ್ಕೆ ತಾಗದೇನೆ ತುಟಿಯಿಂದ ಹೊರಬಿದ್ದು ಗಾಳಿ ಪಾಲಾಗುವ, ಕೈ ಕಣ್ಣುಗಳು ಮಾತಿಗೆ ತಕ್ಕ ಮಾತಿಗೆ ತಕ್ಕ ಭಾವವನ್ನು ಪ್ರದರ್ಶಿಸಿ, ಮರು ಕ್ಷಣದಲ್ಲಿ ತೆಪ್ಪಗಾಗಿ ಬಿಡುತ್ತದೆ ಎನ್ನುವುದು ಕಥಾನಾಯಕನ ವಿಚಾರ ಸರಣೀ ನಗರದ ನಾಗರೀಕ, ಆಧುನಿಕ ಸಮಾಜದ ಸಂಸ್ಕೃತಿಯಾಗಿದೆ.ಇಂತಹ ಒಂದು ಸಂಸ್ಕೃತಿ, ಯಾಂತ್ರಿಕೃತ ಬದುಕು, ಮನುಷ್ಯನನ್ನು ಬದುಕಿನಿಂದ ವಿಮುಖನನ್ನಾಗಿಸುತ್ತದೆ. ಹೀಗಾಗಿ ಇದರಿಂದ ಹೊರಬಂದು, ತನ್ನತನವನ್ನು ಕಂಡುಕೊಳ್ಳಬೇಕೆಂಬ ಮಾನವೀಯ ತುಡಿತ ಅವನಲ್ಲಿ ತೀವ್ರವಾಗುತ್ತದೆ.

ಹೆಂಡತಿ ಮುಖಕ್ಕೆ ಬಣ್ಣ ಬಳಿದುಕೊಂಡು ಮುಖದ ಬಣ್ಣ ಕೆಡಿಸಿಕೊಂಡಿರುವುದರಿಂದ ಹಿಡಿದು,ತಾನೂ ದಿನವೂ ಹೊಸ ಬ್ಲೇಡುಗಳನ್ನು ಮೊಂಡು ಮಾಡುವ ವಿಚಾರ ಆತನಿಗೆ ಬೇಸರವೆನಿಸಿ,ಕೆಲದಿನಗಳು, ಕೆಲಕ್ಷಣಗಳಾದರೂ ವಿಭಿನ್ನ ಸೃಜನಾತ್ಮಕ,ಕೃತಕವಲ್ಲದ ಜಂಜಡರಹಿತ ಬದುಕು,ಬದುಕುವ ಆಕಾಂಕ್ಷೆ ಅವನಲ್ಲಿ ತೀವ್ರವಾಗುತ್ತದೆ.ಕಾದಂಬರಿಕಾರರು ಕಥಾನಾಯಕನ ಮೂಲಕ ಮುಂಬೈನ ಗಡಿಬಿಡಿ ಜೀವನ,ಬದುಕಿನ ಕೃತಿ ಮತೆ, ನಗರದ ನಾಗರೀಕ ಸಂಸ್ಕೃತಿ ತನ್ನ ಮಕ್ಕಳಲ್ಲೇ ಬದುಕಿನ ಬಗೆಗೆ ಇರುವ ಔದಾಸೀನ್ಯ,ಬೇಸರ ಜಿಗುಪ್ಸೆಗಳನ್ನು ಹಾಗೂ ಆತನ ಬಾಲ್ಯದ ಲವಲವಿಕೆಗಳನ್ನು ತುಲನೆ ಮಾಡಿಸುತ್ತಾರೆ.

ಥಾನಾಯಕ ಊರಿಗೆ ಬಂದಾಗ ತನ್ನ ತಂದೆ ತಮ್ಮ ಕೋಣೆಯಲ್ಲಿ ಸಂಗ್ರಹಿಸಿದ್ದ ಅಪರೂಪದ ರಳು,ಕಲ್ಲು,ಹಕ್ಕಿಗರಿ,ಕೆಂಜಳಿನ ಚರ್ಮ ಮುಂತಾದವು ಕಥಾನಾಯಕನಿಗೆ ಕೇವಲ ಭೌತಿಕ ಸ್ತುಗಳಾಗಿರದೆ ಅದು ಸಂಸ್ಕೃತಿಯ ಪ್ರತೀಕಗಳಾಗಿದ್ದು,ಪರಂಪರೆಯಿಂದ ಪರಂಪರೆಗೆ ವಾನಿಸಲ್ಪಡುವ ಸಂಸ್ಕೃತಿಯ ಅಂಶಗಳು ಆಗಿರುತ್ತವೆ. ತನ್ನ ಕೋಣೆಯನ್ನು ತನ್ನ ಮಗಳು ೋಡಲು ಹೊಕ್ಕರೆ ಅವಳು ತಾನೇನು ಸಂಗ್ರಹಿಸಿದ್ದೇನೆ ಎಂಬ ವಿಚಾರ ಕಾಡಿದರೂ ತನ್ನ ಮಗಳು ಂತವುಗಳನ್ನು ನಿರೀಕ್ಷಿಸುವುದಿಲ್ಲವೆಂದು ಸಮಾಧಾನವೆನಿಸುತ್ತದೆ.

ಕಾದಂಬರಿಯಲ್ಲಿ ಬರುವ ಉಪೇಂದ್ರಭಟ್ಟರು ಪಕ್ಕಾ ವೈದಿಕರಾಗಿದ್ದು, ಧರ್ಮ ಸಂಪ್ರದಾಯಗಳ ಬಗ್ಗೆ ಅತೀವ ಗೌರವವಿದ್ದರೂ, ವಿದೇಶಿ ಶಿಕ್ಷಣದ ಬಗ್ಗೆ ಅಷ್ಟೇ ವ್ಯಾಮೋಹವೂ ಇತ್ತು. ಅಡಿಕೆ ಸೊಸೈಟಿಯ ಅಧ್ಯಕ್ಷರಾಗಿದ್ದಾಗ ಅಲ್ಲಿಗೆ ಬರುತ್ತಿದ್ದ ಕ್ರಿಶ್ಚಿಯನ್ನರ ವೇಷಭೂಷಣ, ಇಂಗ್ಲೀಷ್ ಶೈಲಿಗೆ ಮರುಳಾಗಿ, ತಮ್ಮ ಉಡುಪು, ಭಾಷೆ, ಸಂಸ್ಕೃತಿಗಳ ಬಗ್ಗೆ ಕೀಳರಿಮೆ ಬೆಳೆಸಿಕೊಂಡು ತಮ್ಮ ಹಿಂದಿನ ಸಂಪ್ರದಾಯಗಳನ್ನು ಬೇರೊಂದು ರೀತಿಯಲ್ಲಿ ಬೆಳೆಸಲು ಇಚ್ಚಿಸುತ್ತಾರೆ. ತಮ್ಮ ಹಿಂದಿನ ಸಂಪ್ರದಾಯಗಳನ್ನು ಬಿಡಲಾರದೆ, ಹೀಗಾಗಿ ತಮ್ಮ ಮಗನನ್ನು ಬೇರೊಂದು ರೀತಿಯಲ್ಲಿ ಬೆಳೆಸಲು ಇಚ್ಚಿಸುತ್ತಾರೆ. ಇಂಗ್ಲೀಷ್ ಶಾಲೆಗೆ ಸೇರಿಸಿದ್ದರಿಂದ ವೈದಿಕ ಸಂಪ್ರದಾಯಗಳನ್ನು ಅವನು ತಿರಸ್ಕರಿಸುತ್ತಾ ಬರುತ್ತಾನೆ.ಅದರಲ್ಲೊಂದು ಹಿರಿಮೆಯನ್ನು ಕಂಡ ಭಟ್ಟರು ಪರೋಕ್ಷವಾಗಿ ಅವನನ್ನು ಪ್ರೋತ್ಸಾಹಿಸುತ್ತಾರೆ. ಅವನು ಹಾಕುವ ಕೋಟು, ಬೂಟು, ಟೈ ನೋಡಿ ಪುಳಕಿತರಾಗುತ್ತಾರೆ.ಹೀಗೆ ಸಂಸ್ಕೃತಿಯ ಬಗ್ಗೆ ವಿಮುಖರಾಗಿ ಪಾಶ್ಚಾತ್ಯ ಸಂಸ್ಕೃತಿಯ ಕಡೆಗೆ ಒಲವು ತೋರಿದ್ದರ ಪರಿಣಾಮವಾಗಿ ಮಗ ಸುರೇಂದ್ರ ಕ್ರಿಶ್ಚಿಯನ್ ಹುಡುಗಿಯನ್ನು ಪ್ರೀತಿಸಿ,ಕ್ರಿಶ್ಚಿಯನ್ ಆಗಲೇಬೇಕಾದ ಅನಿವಾರ್ಯವಾಗಿ ಸುರೇಂದ್ರ ಡಿ'ಸಿಲ್ವ ಆಗುತ್ತಾನೆ. ಇಲ್ಲಿ ಭಿನ್ನ ಸಂಸ್ಕೃತಿಗೆ ಮಾರುಹೋದ ಉಪೇಂದ್ರಭಟ್ಟರು ಮಗನನ್ನೇ ದೂರ ಮಾಡಿಕೊಳ್ಳಬೇಕಾಗುತ್ತದೆ. ಇಲ್ಲಿ ಅನ್ಯ ಸಂಸ್ಕೃತಿಯ ಪ್ರಭಾವ ಪರಿಣಾಮದಿಂದ ತಮ್ಮತನವನ್ನೇ ಕಳೆದುಕೊಳ್ಳುವುದರ ಜೊತೆಗೆ ಅಮೂಲ್ಯವಾದುದನ್ನು ಕಳೆದುಕೊಂಡ ಉಪೇಂದ್ರಭಟ್ಟರ ಚಿತ್ರಣವನ್ನು ಕಾಣಬಹುದು. ಜೊತೆಗೆ ಮುಂದ್ರಾಡಿಯಲ್ಲೊಂದು ಒಂದು ಇಗರ್ಜಿ ಪ್ರಾರಂಭವಾಗಿ,ಬೇರೊಂದು ಮತ, ಸಂಸ್ಕೃತಿಯ ಪಾದಾರ್ಪಣೆಗೂ ಕಾರಣವಾಗುತ್ತದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ.

ಕುಂಜಾಲು ಕಣಿವೆಯಲ್ಲಿ ಅರಳುವ ಕೆಂಪು ಹೂವು ಕುಂಜಾಲರ ಸಂಸ್ಕೃತಿ, ನಂಬಿಕೆಗಳ ತೀಕ. ಅದು ಅರಳಿರುವುದನ್ನು ನೋಡಿದರೆ ಕುಂಜಾಲರು ನಾಶವಾಗುತ್ತಾರೆಂದು. ಹೂವು ಾವಾಗ ಅರಳುವುದನ್ನು ನಿಲ್ಲಿಸುತ್ತದೋ ಆಗ ಆ ಜನಾಂಗ ಕೂಡ ಸತ್ತುಹೋಗುತ್ತದೆ ಎಂಬುದು ವರ ನಂಬಿಕೆ.ಒಂದು ಸಂಸ್ಕೃತಿಗೆ ಪ್ರತೀಕವಾಗಿದ್ದ ಕುಂಜಾಲರು ಆಧುನಿಕತೆಯ ೋಡಿಗೊಳಗಾಗಿ,ಅವರ ಸಂಖ್ಯೆಯು ಕಡಿಮೆಯಾಗಿ ವ್ಯವಸಾಯವನ್ನು ತೊರೆದು ವಿವಿಧ ಕರ್ಷಣೆಗಳಿಗೆ ಒಳಗಾಗಿ ಒಂದು ಸಂಸ್ಕೃತಿಯ ಸ್ಥಿತ್ಯಂತರಕ್ಕೂ ಕಾರಣವಾಗುತ್ತಾರೆ.

'ವಿಷಾನಿಲ' ಕಾದಂಬರಿಯಲ್ಲಿ ಒಂದು ಕಾರ್ಖಾನೆಯ ಸ್ಥಾಪನೆಯಿಂದಾಗಿ ಅಲ್ಲಿ ಸಾಂಸ್ಕೃತಿಕ ಟುವಟಿಕೆಗಳು ಹೇಗೆ ಸ್ಥಿತ್ಯಂತರಗೊಳ್ಳುತ್ತವೆ ಎಂಬುದನ್ನು ಕಾಣಬಹುದಾಗಿದೆ. ಗುಡಿಯಲ್ಲಿ ಡೆಯುವ ಭಜನೆ, ಮಳೆಗಾಲದಲ್ಲಿ ನಡೆಯುವ ಚಾತುರ್-ಮಾಸದ ಸೇವೆ, ತರುಣರು ದೀಪ ಾಡಲು ಹೋಗಿ ಹಣ ಎತ್ತುವುದು, ಎತ್ತುಗಳನ್ನು ಅಲಂಕರಿಸಿ ಅವುಗಳ ಕುತ್ತಿಗೆಗೆ ಕಟ್ಟುವ ಚೆಕ್ಕ ಾವಲಿಯನ್ನು ಹರಿದುಕೊಳ್ಳುವ ಭಾರಿಸ್ಪರ್ಧೆ, ದೀವರ ಡೊಳ್ಳು ಕುಣಿತ.ಹರಿಜನರ ಕೋಲಾಟ ದ,ಮನರಂಜನೆ ಯಾದಿಯಾಗಿ ಎಲ್ಲವೂ ಕ್ರಮೇಣ ನಿಂತು ಹೋಗುತ್ತವೆ.ಇದು ಹಳ್ಳಿಯ ಜೀವನದ ೇಲಾಗುವ ಸಾಂಸ್ಕೃತಿಕ ಆಘಾತವಾಗಿದೆ.

ನೈಸರ್ಗಿಕ ಶಾಂತಿ ಮುಗ್ಧ ಶಾಂತ ಜೀವನಕ್ಕೆ ಒಗ್ಗಿ ಹೋಗಿದ್ದ ಶಾಂತಿಗೆರೆಯ ಜನ ಮುದಾಯವು ಒಂದು ಕೈಗಾರಿಕೋದ್ಯಮದ ಪ್ರವೇಶದಿಂದಾಗಿ,ಅದರ ಮೂಲಕ ಪಡೆದ ಹಣವು ನರ ನಂಬಿಕೆ ವಿಶ್ವಾಸ,ಪೂಜೆ ಭಜನೆಯಂತಹ ಸಾಂಸ್ಕೃತಿಕ ಆಟೋಟ ಸ್ಪರ್ಧೆಯನ್ನು ಾಳುಗೆಡವಿದಲ್ಲದೆ,ಸ್ನೇಹ ಸೌಹಾರ್ದತೆಯಿಂದ ಜನರನ್ನು ಸೇತುವೆಯಮತೆ ಬೆಸೆಯುವ ೋಡೆಯಂತೆ ವಿಭಾಗಿಸುವ ಪರಿ ಇಲ್ಲಿ ಗಮನೀಯವಾದುದು.ಶಿವರಾಮಯ್ಯ ಹಾಗೂ ಾಮಕೃಷ್ಣಯ್ಯನವರಲ್ಲಿ ಅನ್ಯೋನ್ಯತೆಯೂ ಕಡಿಮೆಯಾಗಿರುತ್ತದೆ. ವೀರಭದ್ರನ ಕುತಂತ್ರದ ವಿಷಯ ಾಮಕೃಷ್ಣಯ್ಯನವರಿಂದ ತಿಳಿದಾಗ ಕುಪಿತರಾಗಿ ವೀರಭದ್ರನನ್ನು ಬೈಯುತ್ತ "ಹಣ ಬರಲಿ ಅಂತ— ಆದರೆ ನಾನು ಅದಕ್ಕಿಂತ ಅಮೂಲ್ಯವಾದದ್ದನ್ನು ಕಳೆದುಕೊಂಡೆ."ಎನ್ನುವ ಮಾತು ಹೃದಯಾಳದ ಅಂತಃಕರಣದ ಮಾತಾಗಿದೆ.ಇದು ಅವರೊಬ್ಬರ ಮಾತಾಗಿರದೆ ನಗರವಾಸಿಗಳಾದ ನಾವೆಲ್ಲರೂ ಕ್ರಮೇಣ ಅಮೂಲ್ಯವಾದುದನ್ನು ಕಳೆದುಕೊಳ್ಳುತ್ತಲೇ ಇದ್ದೇವೆ ಎಂಬುದನ್ನು ಸೂಚಿಸುತ್ತದೆ.

'ಚಿನ್ನದ ಮೊಟ್ಟೆ' ಕಾದಂಬರಿಯಲ್ಲಿ ಹಳದಪ್ಪನ ಹೊಲದಲ್ಲಿ ಬಂಡೆ ಸಾಂಸ್ಕೃತಿಕ ಂದ್ರವಾಗಿತ್ತು.ಹಳ್ಳಿಜನ ಬೆಳದಿಂಗಳ ಊಟಕ್ಕೆ ಆ ಬಂಡೆಯನ್ನೇ ಆರಿಸಿಕೊಳ್ಳುತ್ತಿದ್ದರು. ಸಾಂಸ್ಕೃತಿಕ ಚರಣೆಯಾದ ಭೂ ಹುಣ್ಣಿಮೆಯ ದಿನ ಜನ ಅವರವರ ಹೊಲಗಳಲ್ಲಿ ಪೂಜೆ ಮುಗಿಸಿಕೊಂಡು ಲ್ಲರೂ ಇಲ್ಲಿಗೇನೆ ಬುತ್ತಿ ಹೊತ್ತು ಬರುತ್ತಿದ್ದರು. ಹಣದಾಸೆಗೆ ಒಳಗಾದ ಹಳದಪ್ಪ ಆ ಬಂಡೆಯನ್ನು ೈನಾಮೈಟ್ ಸಿಡಿಸಿದ್ದರಿಂದ ಹಿಂದಿನ ಸುಂದರ ದೃಶ್ಯದ ಜಾಗದಲ್ಲಿ ಛಿದ್ರವಾದ ಭೂಕಂಪನದ ಂತರದ ಒಂದು ಕಠೋರ ದೃಶ್ಯ ಕಂಡು ಬರುತ್ತಿತ್ತು.

ಹೀಗೆ ಡಿಸೋಜರವರ ಕಾದಂಬರಿಗಳಲ್ಲಿ ಸಂಸ್ಕೃತಿ, ಜನರ ರೀತಿ ನೀತಿಗಳ ಸ್ಥಿತ್ಯಂತರವನ್ನು ುರುತಿಸಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ನಾ. ಡಿಸೋಜ, ದ್ವೀಪ, ಗಿರೀಶ್ ಕಾಸರವಳ್ಳಿ, ಕಾದಂಬರಿಯ ಸಿನಿಮಾ ಸಾಧ್ಯತೆಗಳು ಪು–೮೯

೨. ನಾ. ಡಿಸೋಜ, ಅಭಿನಂದನ, ಪುಟ – ೧೫೭

೩. ಅದೇ ಪುಟ – ೩೭

೪. ಅದೇ ಪುಟ – ೪೦

೫. ಅದೇ ಪುಟ – ೯೧

೬. ಅದೇ ಪುಟ – ೧೧೨

೭. ಅದೇ ಪುಟ ೧೨೧–೧೨೨

೮. ನಾ. ಡಿಸೋಜ, ಒಂದು ಜಲಪಾತದ ಸುತ್ತ ಪುಟ – ೧೨೩

೯. ನಾ. ಡಿಸೋಜ, ಮುಳುಗಡೆ, ಪುಟ – ೨೯

೧೦. ನಾ. ಡಿಸೋಜ, ಒಡ್ಡು, ಪುಟ – ೮೨

೧೧. ನಾ. ಡಿಸೋಜ ಅಭಿನಂದನ, ಸುಬ್ರಾಯ ಚಕ್ಕೋಡಿ–ಒಡ್ಡು ಕಾದಂಬರಿಯ ಬಗ್ಗೆ ಪುಟ ೧೮೬

೧೨. ನಾ. ಡಿಸೋಜ, ಒಂದು ಜಲಪಾತದ ಸುತ್ತ ಪುಟ – ೧೦೫

೧೩. ನಾ. ಡಿಸೋಜ, ವಿಷಾನಿಲ ಪುಟ – ೪೪

೧೪. ನಾ. ಡಿಸೋಜ, ಅಭಿನಂದನಾ ಪುಟ – ೧೭೬

೧೫. ನಾ. ಡಿಸೋಜ, ಮುಳುಗಡೆ, ಪುಟ – ೬೫

೧೬. ನಾ. ಡಿಸೋಜ, ಒಡ್ಡು, ಪುಟ – ೩೪.

# ಅಧ್ಯಾಯ – ೬
# ಕಾದಂಬರಿಗಳಿಗೆ ಸಂಬಂಧಿಸಿದ ಕೆಲವು ಪ್ರಮುಖ ಅಂಶಗಳು

## ) ಗಂಡು ಹೆಣ್ಣಿನ ಸಂಬಂಧ

ಹೆಣ್ಣಿಗೆ ಗಂಡಾಗಿ ಕಾಡಿತ್ತು ಮಾಯೆ. ಗಂಡಿಂಗೆ ಹೆಣ್ಣಾಗಿ ಕಾಡಿತ್ತು ಮಾಯೆ" ಎಂಬುದಾಗಿ ಕ್ಕ ತನ್ನ ಒಂದು ವಚನದಲ್ಲಿ ಹೇಳುತ್ತಾಳೆ. ಗಂಡು ಹೆಣ್ಣಿನ ಸಂಬಂಧ ಜೀವನದ ಹತ್ತು ಹಲವು ಮಸ್ಯೆಗಳಿಗೆ ಕಾರಣವಾಗುತ್ತದೆ.

ಮನುಷ್ಯ ಮಾನಸಿಕವಾಗಿ ಯಾವುದೇ ಚೌಕಟ್ಟಿಗೆ ಒಳಪಡದೆ ಸ್ವಚ್ಛಂಧತೆಯನ್ನು ಯಸುತ್ತಾನೆ.ಅನೇಕ ಸಾಮಾಜಿಕ ಚೌಕಟ್ಟುಗಳನ್ನು ರೂಪಿಸಿಕೊಂಡಿದ್ದರೂ, ಅವುಗಳ ುಲ್ಲಂಘನೆಯಲ್ಲಿಯೇ ನಿರತನಾಗಿರುತ್ತಾನೆ.ಆ ರೀತಿ ಮಾಡುವಲ್ಲಿ ಅವನು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅದು ಸಾಮಾಜಿಕವಾಗಿರಬಹುದು. ದೈಹಿಕವಾಗಿರಬಹುದು, ಮನುಷ್ಯನ ಮೂಲಭೂತ ಪ್ರವೃತ್ತಿಗಳಲ್ಲಿ ಕಾಮವೂ ಒಂದು. ಇದು ವ್ಯಕ್ತಿಯ ಬದುಕಿಗೆ ಪೂರಕವೆಂತೋ, ಅಂತೆಯೇ ಮಾರಕವು ಆಗಬಲ್ಲದು. ಪರಸ್ತ್ರೀ ವ್ಯಾಮೋಹದಿಂದ ಸಮಾಜದಲ್ಲಿ ಅಶಾಂತಿ ಉಂಟಾಗುತ್ತದೆ ಎನ್ನುವುದು ಸಾರ್ವಕಾಲಿಕ ಸತ್ಯ. ಹೆಣ್ಣಿನ ಸಲುವಾಗಿ ಅನೇಕ ಮಹಾನ್ ಯುದ್ಧಗಳೇ ನಡೆದಿರುವುದನ್ನು ಪುರಾಣ ಮತ್ತು ಇತಿಹಾಸಗಳಿಂದ ತಿಳಿಯಬಹುದಾಗಿದೆ.

ಹೆಣ್ಣು ಗಂಡಿನ ದಾಂಪತ್ಯ ಜೀವನದಲ್ಲಿ ಉಂಟಾಗುವ ಅನೇಕ ಸಮಸ್ಯೆಗಳಿಗೆ ಲೈಂಗಿಕ ಹೊಂದಾಣಿಕೆಯ ಅಭಾವವು ಒಂದು. ಅದು ಅನೇಕ ಮನೋದೈಹಿಕ ದೌರ್ಬಲ್ಯಗಳ ಮೂಲಕವು ವ್ಯಕ್ತವಾಗಬಹುದು.ಆದರೆ ಅವೆಲ್ಲಕ್ಕೂ ಮೂಲ ಲೈಂಗಿಕತೆಯೇ ಎಂದು ಗುರುತಿಸಲು ಸಾಧ್ಯವಾಗುವುದಿಲ್ಲ.

ಲೈಂಗಿಕ ಜೀವನದ ಹೆಚ್ಚು ವಿವರಗಳನ್ನು ಕೊಡುವುದು ಡಿಸೋಜರವರ ವ್ಯಕ್ತಿತ್ವಕ್ಕೆ ಸಾಧ್ಯವಿಲ್ಲ. ಆದರೆ ಕಾಡಿನ ಬೆಂಕಿ ಮಾತ್ರ ಲೈಂಗಿಕತೆಯ ವೈಪರೀತ್ಯಗಳನ್ನು ತಿಳಿಸುವ ಚಿತ್ರಣವಾಗಿದೆ.ಅವರೇ ಕಾಡಿನ ಬೆಂಕಿ ಕಾದಂಬರಿಯ ಮುನ್ನುಡಿಯಲಿ ತಿಳಿಸಿರುವಂತೆ "ಮನುಷ್ಯ ತನ್ನ ಲೈಂಗಿಕ ಕ್ರಿಯೆಯನ್ನು ಗುಪ್ತವಾಗಿ ನಡೆಸುತ್ತಾನೆ.ಈ ಕ್ರಿಯೆಯೇ ಹಲವು ದುರಂತಗಳಿಗೂ

ರಣವಾಗಬಹುದು. ಲೈಂಗಿಕ ಸಮಸ್ಯೆಗಳ ಬಗ್ಗೆ ಮಾತಾಡಲು ,ಓದಲು,ಬರೆಯಲು ವೈದ್ಯರಲ್ಲಿ ರ್ಚಿಸಲು ಹಿಂಜರಿಯುವ ಜನ ಈ ಸಮಸ್ಯೆಗೆ ಸಿಕ್ಕಿ ನರಳುತ್ತಾರೆ. ಇದು ಅಂತಹ ಕಥೆ. life is tranger than fiction ಎನ್ನುತ್ತಾರೆ. ಈ ಕಥೆಯು ಹಾಗೆಯೇ ಇದೆ. ನಾಗರಿಕ ಪ್ರಪಂಚ ೕಳಲು,ಓದಲು ಹೇಸಬಹುದಾದ ಕಥೆಯಿದು. ಇದನ್ನು ಬರೆಯದೆ ಮುಚ್ಚಿಟ್ಟರೆ ಅದು ಇನ್ನೊಂದು ದುರಂತವಾದೀತೆಂದು ನಾನು ಬರೆದಿದ್ದೇನೆ. ವಸ್ತುಸ್ಥಿತಿ ಅದೆಷ್ಟೇ ಭಯಾನಕವಾದುದಾಗಲಿ ಅದನ್ನು ಅರ್ಥಮಾಡಿಕೊಳ್ಳುವ ಮನೋಭಾವ ವೈಚಾರಿಕತೆಯ ಲಕ್ಷಣ"[9] ಎಂದು ಕಾಂದಂಬರಿಯ ರಚನೆಗೆ ಸಕಾರಣವನ್ನು ತಿಳಿಸಿದ್ದಾರೆ.

ದ್ವೀಪ ಕಾದಂಬರಿಯಲ್ಲಿ ನಾಗವೇಣಿ ಗಣಪಯ್ಯನನ್ನು ಮದುವೆಯಾಗಿ ಸಂಸಾರವನ್ನು ನಡೆಸುತ್ತಿರುತ್ತಾಳೆ. ಆದರೂ ಅವಳ ಮನಸ್ಸು ಸದಾ ಕೃಷ್ಣಯ್ಯನನ್ನು ಹಂಬಲಿಸುತ್ತದೆ. ಜೊತೇಲಿ ಬೆಳದೋರು ಕೃಷ್ಣಯ್ಯನು ನಾಗುವನ್ನು ಬಯಸುತ್ತಾನೆ. ಕೃಷ್ಣಯ್ಯ ಹತ್ತಿರ ಬಂದ ಹಾಗೆ ನಾಗವೇಣಿ ಮನಸ್ಸು ಚಂಚಲವಾಗುತ್ತದೆ.

ಈಗೀಗ ಕೃಷ್ಣಯ್ಯನೇ ಎಲ್ಲೆಲ್ಲೂ ತುಂಬಿಕೊಂಡಿದ್ದಾನೆ. ಗಂಡನ ಬಗ್ಗೆ ಈಗ ಮತ್ತೂ ಜಿಗುಪ್ಸೆ, ಹೇಸಿಗೆ, ತಿರಸ್ಕಾರ, ಗಂಡನೊಡನೆ ಬದುಕುವುದೇ ಬೇಕಿಲ್ಲ ಅನ್ನುವಲ್ಲಿಗೂ ತಾನು ಬಂದು ಮುಟ್ಟಿದ್ದೇನೆ. ತನಗೆ ಕೃಷ್ಣಯ್ಯನೇ ಬೇಕು. ಧರ್ಮವೋ – ಅಧರ್ಮವೋ, ಸರಿಯೋ-ತಪ್ಪೋ ಕೃಷ್ಣಯ್ಯನಿಗಾಗಿ ಜೀವ ಹಂಬಲಿಸುತ್ತದೆ. ಅವನನ್ನು ಸಂಪೂರ್ಣವಾಗಿ ಪಡೆಯುವ ತನಕ ಈ ಹಂಬಲ ನಿಲ್ಲುವುದಿಲ್ಲ.

ಹೀಗೆ ನಾಗವೇಣಿ – ಕೃಷ್ಣಯ್ಯನ ನಡುವಿನ ಮಿಲನ ನಡೆದುಹೋಯಿತು ಕೆಲ ನಿಮಿಷಗಳು ಹೊರಗಿನ ಪ್ರಪಂಚವನ್ನು ಮರೆಯುತ್ತಾರೆ. ಕೊನೆಯಲ್ಲಿ ಇಬ್ಬರ ಮನಸ್ಸಿನಲ್ಲಿ ಒಂದು ಮಾತು ಮೂಡುತ್ತದೆ "ನಾಪಿವತ್ತು ಸುಖಿ.. ನನ್ನ ಆಸೆ ಇವತ್ತಿಗೆ ಈಡೇರಿತು..." ಇಲ್ಲಿ ನಾಗವೇಣಿ ಮತ್ತು ಕೃಷ್ಣಯ್ಯಯರ ಪ್ರೀತಿ ನಿಷ್ಕಳಂಕವಾಗಿರುತ್ತದೆ.

ಇದೇ ರೀತಿ ಮುಳುಗಡೆ – ಒಡ್ಡು ಕಾದಂಬರಿಯಲ್ಲೂ ಗಂಡು-ಹೆಣ್ಣಿನ ಸರಸ ಸಲ್ಲಾಪಗಳನ್ನು ನಾನಾ ರೀತಿಯ ಸಂಬಂಧಗಳನ್ನು ನಾ.ಡಿಸೋಜರವರು ವಿವರಿಸಿದ್ದಾರೆ.

ಕುಂಜಾಲು ಕಣಿವೆಯ ಕೆಂಪು ಹೂವು-ಕಾದಂಬರಿಯಲ್ಲಿ ರಾಮರಾಯರು ಕೆಂಪು ಹೂವನ್ನು ನೋಡಲು ಹೋದಾಗ ಗಿರಿಜನರ ನಿವಾಸಕ್ಕೆ ಬರುತ್ತಾರೆ. ಅಲ್ಲಿನ ತರುಣಿಯ ಸೌಂದರ್ಯವನ್ನು ನೋಡಿ ಅಸ್ವಾದಿಸುತ್ತಾರೆ. ಮುದುಕ ಗಂಡನೊಡನೆ ಅವಳ ವಿಷಮ ದಾಂಪತ್ಯವನ್ನು ಕಂಡು ಅವಳಿಗಾಗಿ ಮರುಗುತ್ತಾರೆ. ಕೆಂಪು ಹೂವನ್ನು ಕಂಡು ಉನ್ಮಾದ ಸಂತೋಷ ಭರಿತರಾಗಿ, ಅದೇ ಗುಂಗಿನಲ್ಲಿ ಆ ನಿವಾಸಕ್ಕೆ ಬಂದಾಗ ಯಥಾ ಪ್ರಕಾರ ಮುದುಕ ಕುಡಿದು ಪ್ರಜ್ಞೆ ಇಲ್ಲದೆ ಬಿದ್ದುಕೊಂಡಿರುತ್ತಾನೆ. ಇವರನ್ನು ಕಂಡದ್ದೇ ಆ ತರುಣಿ ನಗುತ್ತಾಳೆ. "ಅವಳ ಮೈಯೆಲ್ಲಾ ಸಾವಿರ ಹೂವಾಗಿ ಅರಳಿ, ಹೂವಿನ ರಾಶಿಯಂತೆ ಸೊಂಪಾಗಿ ಕಂಡು ಗಾಳಿಗೆ ತೊನೆದಾಡಿದಳು. ಯಾವುದೋ ಮಂಪರು ಉನ್ಮಾದದಲ್ಲಿದ್ದರಾಯರು ಕೆಂಪು ಹೂವನ್ನೇ ಕಂಡಂತಾಗಿ ಆ ತರುಣಿಯನ್ನು ಹತ್ತಿರ ಎಳೆದುಕೊಂಡು ಅವಳ ಮೈಯನ್ನು ಕಂಡಲೆಲ್ಲಾ ಚುಂಬಿಸಿದರು."[2]

ಇಲ್ಲಿ ಅವರ ಸಂಬಂಧದಲ್ಲಿ ಕಾಮದ ಉನ್ಮಾದಕ್ಕಿಂತ ಭಾವನಾತ್ಮಕ ಸಂಬಂದವನ್ನು ಕಾದಂಬರಿಕಾರರು ತರುತ್ತಾರೆ. ಆ ತರುಣಿಯು ಸಹ ಸಂಪೂರ್ಣವಾಗಿ ತನ್ನನ್ನು ಸಮರ್ಪಿಸಿಕೊಂಡು ಸಂಪೂರ್ಣ ಸುಖವನ್ನು ಅವರ ಸಹವಾಸದಲ್ಲಿ ಪಡೆಯುತ್ತಾಳೆ. ಅವಳ ಮನೋಭಾವನೆಯನ್ನು ನಾವು ಅವಳ ಈ ಮಾತುಗಳಲ್ಲಿ ಕಾಣಬಹುದಾಗಿದೆ. ಮುಂದೆ ರಾಮರಾಯರ ಮಗನಾದ ಅನಂತ ಅದೇ ಹೂವನ್ನು ಕಾಣಲು ಕುಂಜಾಲು ಕಣಿವೆಗೆ ಬಂದಾಗ ಅವನ ತಾಯಿಯಷ್ಟೇ ವಯಸ್ಸಿನ ಸುಂದರವಾದ ಹೆಂಗಸು "ಮಗೂ" ಎಂದು ಮಾತನಾಡಿಸುತ್ತಾಳೆ. ತಾನು ಕೆಂಪು ಹೂವು ನೋಡಲು ದೂರದಿಂದ ಬಂದಿದ್ದೇನೆ ಎಂದಾಗ "ಆ ಹೂವು ಅರಳುತ್ತಿದೆ ಏನು ಹಾಗಾದರೆ ... ನನ್ನ ಇಡೀ ಜೀವಮಾನದಲ್ಲಿ ಆ ಹೂವು ಏಳೆಂಟು ದಿನಗಳ ಕಾಲ ಸುಖ, ಸಂತೋಷ , ಸ್ನೇಹ –ಪ್ರೀತಿ ಮತ್ತೂ ಏನೇನೋ ನನಗೆ ನೀಡಿತ್ತು. ಆ ಹೂವು ಇನ್ನೂ ಅರಳುತ್ತಿದೆಯೇನು_ ಸಂತೋಷ _ಬಾ ಒಳಗೆ. ನಾಳೆ ನೋಡುವಿಯಂತೆ ಎನ್ನುತ್ತಾಳೆ. ಅನುಭವವು ಸವಿಯಲ್ಲ, ಅನುಭವವು ಸವಿಯಲ್ಲ. ಅನುಭವದದ ನೆನೆಪು ಸವಿ ಎಂಬ ಅನುಭವಿಗಳ ಮಾತನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು. ಆದರೆ ಇದೇ ಕಾದಂಬರಿಯ ನಾಯಕ ಅನಂತ ಎಲ್ಲಿಯೂ ಸಂಯಮ ಮೀರಿ ನಡೆಯದಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ. ಯಾವುದೇ ಹೆಣ್ಣನ್ನು ಕಂಡಾಗಲೂ ತನ್ನ ಹೆಂಡತಿಯೊಂದಿಗೆ ಹೋಲಿಸಿ ನೋಡುವ ಮನೋಭಾವನೆಯನ್ನು ಕಾಣಬಹುದೆ ಹೊರತು ಸಭ್ಯತೆಯನ್ನು ಮೀರುವುದಿಲ್ಲ. ಪ್ರಯಾಣದ ಸಂಧರ್ಭದಲ್ಲಿ ತನ್ನ ಹಳೆಯ ಸಹಪಾಠಿಯಾದ ಸುವರ್ಣಳನ್ನು ಸಂಧಿಸಿದಾಗ ,ಗಂಡನನ್ನು ಕಳೆದುಕೊಂಡಿದ್ದಂತಹ ಅವಳು ರಾತ್ರಿ ತಮ್ಮಲ್ಲಿಯೇ ಉಳಿಯುವಂತೆ

ಒತ್ತಾಯಿಸಿದ್ದರೂ ಯಾವುದೋ ಒಂದು ಹೆದರಿಕೆಯಿಂದ ಅವಳಿಗೆ ಸುಳ್ಳು ನೆಪ ಹೇಳಿ ಅಲ್ಲಿಂದ ಬಂದು ನಂತರ ಪರಿತಪಿಸುತ್ತಾನೆ. ಯೌವ್ವನದ ಆರಂಭದ ದಿನಗಳಲ್ಲಿ ತನ್ನ ದೈಹಿಕ ಕಾಮನೆಗಳನ್ನು ಜಾಗೃತಗೊಳಿಸಿ ತನ್ನನ್ನು ಹಿಂಸಿಸಿದ್ದ, ನೋಯಿಸಿದ್ದ ಸುವರ್ಣಳನ್ನು ಬಿಟ್ಟು ಬರಬಾರದಿತ್ತು, ಎಂದು ಪೇಚಾಡಿಕೊಳ್ಳುತ್ತಾನೆಯೇ ಹೊರತು, ಎಲ್ಲಿಯೂ ತನ್ನ ಸಂಯಮವನ್ನು ಮೀರುವುದಿಲ್ಲ.

'ನೀರು' ಕಾದಂಬರಿಯಲ್ಲಿ ಬರುವ ಅನಂತ ರತ್ನಳಲ್ಲಿ ಇಟ್ಟಿರುವಂತಹ ಪ್ರೀತಿ ನಿಷ್ಕಳಂಕವಾಗಿರುವಂತದ್ದು. ಅವರ ಪ್ರೇಮ, ಭಾವನಾತ್ಮಕ ಸಂಬಂಧಗಳು ರಸಾನುಭವದ ಕೊರತೆಯಿಂದ ಬಾಡಿಹೋದಂತೆನಿಸುತ್ತದೆ. ಡಾ.ಕೇಶವಮೂರ್ತಿಯವರ ಪತ್ನಿ ಸರಸ್ವತಿ ಗಂಡನ ಆದರ್ಶಗಳಿಗೆ ಅನುರೂಪಳಾಗಿದ್ದು,ಅವನ ಎಲ್ಲಾ ಕಾರ್ಯಗಳಲ್ಲೂ ಸಹಕರಿಸುತ್ತಾಳೆ.ಆದರೆ ಅವರ ಮಧುರ ದಾಂಪತ್ಯವಾಗಲೀ, ಒಂದು ಸಾಂಸಾರಿಕ ಅನುಭಂಧವಾಗಲೀ ಇಲ್ಲಿ ವ್ಯಕ್ತವಾಗದೆ ಇರುವುದನ್ನು ಕಾಣಬಹುದು.

ಗಂಡು ಹೆಣ್ಣಿನ ಸಂಬಂಧಗಳನ್ನು ಒಂದು ಪರಿಧಿಯಲ್ಲಿಯೇ ನೋಡುವ ಡಿಸೋಜರವರು ಕೆಳಸ್ತರದವರ ಹೆಣ್ಣು ಗಂಡಿನ ಸಂಬಂಧವನ್ನು ಚಿತ್ರಿಸುವಾಗ ಮಾತ್ರ ಮುಕ್ತ ಸಂಬಂಧಗಳನ್ನು ತರುತ್ತಾರೆ ಒಂದು ಜಲಪಾತದ ಸುತ್ತ ಕಾದಂಬರಿಯ ಪ್ರವಾಸಿ ಮಂದಿರದ ಕಾವಲುಗಾರ ಕೆಂಪಣ್ಣ ಹಾಗೂ ಅವನ ವಿಷಮ ದಾಂಪತ್ಯದೊಂದಿಗೆ ಅವನ ಅನೈತಿಕ ಸಂಬಂಧವನ್ನು ತಿಳಿಸುತ್ತಾರೆ. ನೋಡಲು ಅಸಹ್ಯವಾಗಿ ಕಾಣುತ್ತ ಸದಾ ಜಗಳವಾಡುವ, ಸಿಡಿಕಿನ ಸ್ವಭಾವದ ಹೆಂಡತಿಯನ್ನು ಸದಾ ಒಡೆಯುತ್ತಾ, ಬಡಿಯುತ್ತಾ, ಇರುವ ಕೆಂಪಣ್ಣ ತನ್ನ ದೊಡ್ಡಪ್ಪನ ಮಗ ಮಲ್ಲಪ್ಪನಿಗೆ ಹಂದಿ ತಿವಿದು ಗಾಯ, ಕೀವು, ನೋವುಗಳಿಂದ ನರಳುತ್ತಾ, ಅಸಹಾಯಕನಾಗಿ ಮಲಗಿರುವಾಗ ಅವನನ್ನು ನೋಡುವ ಸಲುವಾಗಿ, ಸಾಂತ್ವನಗೊಳಿಸುವ ನೆಪದಿಂದ ಅಲ್ಲಿಯೇ ವಸತಿ ಮಾಡುವ ಕೆಂಪಣ್ಣ ಚೆನ್ನಾಗಿರುವ ಮಲ್ಲಪ್ಪನ ಹೆಂಡತಿಯೊಂದಿಗಿನ ಸಂಬಂಧವನ್ನು ಡಿಸೋಜರವರು ಸೂಕ್ಷ್ಮವಾಗಿ ನಿರೂಪಿಸುತ್ತಾರೆ. ಮಲ್ಲಪ್ಪನ ಸಾವಿನ ನಂತರ ಅವನ ದಾರಿ ಸುಗಮವಾದರೂ ತನ್ನ ಮೊದಲ ಹೆಂಡತಿ ಇರುವ ಕಾರಣ ಅವಳನ್ನು ತನ್ನ ಬಳಿ ಇರಿಸಿಕೊಳ್ಳಲು ಸಾಧ್ಯವಾಗದೇ ಇದ್ದುದರಿಂದ ಮಲ್ಲಪ್ಪನ ಹೆಂಡತಿಗಾಗಿ ತನ್ನ ಹೆಂಡತಿಯ ಕತ್ತು ಹಿಸುಕಿ ಕೆರೆಗೆ ಹಾಕಿದ ಕೆಂಪಣ್ಣನ ವಿಕೃತ ಕೃತ್ಯ ಅವನ ಇನ್ನೊಂದು ಮುಖವನ್ನು ಪರಿಚಯಿಸುತ್ತದೆ. ಮಲ್ಲಪ್ಪನ ಸಾವಿನ ನಂತರ ಅವಳನ್ನು

ಕರೆತಂದು ಕೂಡಿಕೆ ಮಾಡಿಕೊಂಡಿರುತ್ತಾನೆ. ಆದರೆ ಕೆಂಪಣ್ಣಿ ಈ ಹಿಂದೆ ತಿಳಿಸಿದ್ದ ಯಾವುದೇ ಬಡಾಯಿಗಳು ಅಲ್ಲಿಲ್ಲದೆ ಇದ್ದುದರಿಂದ ಸದಾ ಗಂಡ ಹೆಂಡತಿ ಮತ್ತೇ ಜಗಳವಾಡಿಕೊಂಡಿರಬೇಕಾಗುತ್ತದೆ. ಅಲ್ಲಿಗೆ ಹೊಸದಾಗಿ ಬಂದಿದ್ದ ಚಾರ್‌ಕೋಲ್ ಬಸ್ಸಿನ ಡ್ರೈವರ್ ಬಿಲಂದರ್‌ನೊಂದಿಗೆ ಸಲಿಗೆ ಬೆಳೆದು ಒಂದು ದಿನ ಅವನೊಂದಿಗೆ ಓಡಿ ಹೋಗುತ್ತಾಳೆ. ಇಲ್ಲಿ ಡಿಸೋಜರವರು ತಮ್ಮ ಚೌಕಟ್ಟಿನ ಪರಿಧಿಯನ್ನು ಭೇಧಿಸಿ ಸ್ವಲ್ಪ ಮಟ್ಟಿಗಿನ ವಾಸ್ತವಿಕ ಜಗತ್ತಿಗೆ ಬಂದಿರುವುದನ್ನು ಕಾಣಬಹುದಾಗಿದೆ. ಆದರೆ ಪಾಪ ಪ್ರಜ್ಞೆಯಿಂದ ಕೆಂಪಣ್ಣಿ ಆತ್ಮಹತ್ಯೆ ಮಾಡಿಕೊಳ್ಳುವಲ್ಲಿ ಅನೈತಿಕತೆಗೆ ಶಿಕ್ಷೆ ತಪ್ಪದು ಎನ್ನುವ ಪಾರಂಪರಿಕ ನೈತಿಕ ಪ್ರಜ್ಞೆ ಇರುವುದನ್ನು ಗುರುತಿಸಬಹುದಾಗಿದೆ.

ಇನ್ನು ರುಜಾರಿ ಮರಿಯಾಳ ನಡುವಿನ ಸಂಬಂಧಗಳು ಪರಸ್ಪರ ಅಸಹಾಯಕತೆ ಕನಿಕರದ ಸೀಮೆಯಲ್ಲಿ ಆಕರ್ಷಣೆ, ಪ್ರೀತಿ ಅನಿವಾರ್ಯಗಳಾಗಿ ಮದುವೆಯಲ್ಲಿ ಪರ್ಯಾವಸಾನವಾಗುತ್ತದೆ. ಪ್ರಕೃತಿಯ ಮಡಿಲಲ್ಲಿದ್ದ ರುಜಾರಿಗೆ, ಮೂಡಿ ಬರಲು ಜಲಪಾತ ಹಾಗೂ ಆ ಬಂಗಲೆಯೂ ಕಾರಣವಾಗಿತ್ತು. ಹೀಗಾಗಿ ಪ್ರಕೃತಿಯ ಒಂದೊಂದೇ ಗುಟ್ಟು ಅವನಿಗೆ ಅರಿವಾಗಿ ಗಂಡು ಹೆಣ್ಣಿನ ಸಂಬಂಧದ ಬಗ್ಗೆ ಮಧುರ ಕಲ್ಪನೆಯೊಂದನ್ನು ಹೊಂದಿದ್ದ. ಹೀಗಾಗಿ ಮರಿಯಾಳೊಂದಿಗಿನ ಅವನ ದಾಂಪತ್ಯ ಜೀವನವು ಪ್ರಕೃತಿ ಸೌಂದರ್ಯವನ್ನು ಸವಿಯುವುದರ ಜೊತೆಗೆ ಸುಮಧುರವಾಗಿ ಸಾಗುವಂತೆ ಡಿಸೋಜರವರು ಪ್ರೀತಿ ವಾತ್ಸಲ್ಯ ಆದರ್ಶಮಯ ಸಾಂಸಾರಿಕ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

ಮರಿಯಾಳ ಮಲತಾಯಿ ತಮ್ಮ ದುಮಿಂಗ ಮದುವೆಗೆ ಮುನ್ನವೇ ಬೇರೊಬ್ಬಳ ಸಂಪರ್ಕವನ್ನಿಟ್ಟುಕೊಂಡಿದ್ದು, ನಿತ್ಯ ಸಂಜೆ ಕುಡಿದು ತೂರಾಡುತ್ತ ಬರುವ ಅವನು ಮರಿಯಾಳ ಮೇಲೆ ತನ್ನ ಕೆಟ್ಟ ಕಣ್ಣನ್ನು ಹಾಕಿ ಮಾಡುವ ಕುಚೇಷ್ಟೆಗಳು ಅವಳನ್ನು ಮಾನಸಿಕವಾಗಿ ಹಿಂಸಿಸುತ್ತದೆ. ಅವಳೊಬ್ಬಳೇ ಇದ್ದಾಗ ಹಿಡಿದುಕೊಳ್ಳಲು ಬರುವ ದುಮಿಂಗನ ವರ್ತನೆ ಮರಿಯಾಳೊಬ್ಬಳ ಸಮಸ್ಯೆ ಮಾತ್ರವಲ್ಲ, ನಮ್ಮ ಸಮಾಜದಲ್ಲಿನ ಅನೇಕ ಹೆಣ್ಣು ಮಕ್ಕಳಿಗೆ ಆಗುತ್ತಿರುವ ಲೈಂಗಿಕ ಕಿರುಕುಳವೂ ಆಗಿರುವುದನ್ನು ನಾವಿಲ್ಲಿ ಗಮನಿಸಬಹುದು. ಜೊತೆಗೆ ಇಲಾಖಾ ಮುಖ್ಯಸ್ಥರು ತಮ್ಮ ಕೈ ಕೆಳಗಿನ ಹೆಣ್ಣುಗಳನ್ನು ನಡೆಸಿಕೊಳ್ಳುವ ರೀತಿಯನ್ನು ಡಿಸೋಜರವರು ಈ ಕಾದಂಬರಿಯಲ್ಲಿ ಸೂಕ್ಷ್ಮವಾಗಿ

ಳಿಸುತ್ತಾರೆ. ಹೆಣ್ಣು, ಹೊನ್ನು, ಮಣ್ಣು – ಈ ಮೂರು ವಿಷಯಗಳಿಗೋಸ್ಕರ ಇಡೀ ಜಗತ್ತಿನಲ್ಲಿ ಅನೇಕ ಕದನಗಳಾಗಿರುವುದನ್ನು ಇತಿಹಾಸದ ಪುಟಗಳಿಂದ ನಾವು ತಿಳಿಯಬಹುದಾಗಿದೆ. ಮನುಷ್ಯ ತನ್ನ ಅಭಿಲಾಷೆಯನ್ನು ಕೂಡೇರಿಸಿಕೊಳ್ಳುವ ಸಲುವಾಗಿ ಒಮ್ಮೊಮ್ಮೆ ಏನು ಮಾಡಲೂ ಹೇಸುವುದಿಲ್ಲ. ಚಿನ್ನದ ಮೊಟ್ಟೆ ಕಾದಂಬರಿಯಲ್ಲಿ ಬರುವ ಮೇಸ್ತ್ರಿ ಲಿಂಗಪ್ಪ ತಾನು ಕಂಟ್ರಾಕ್ಟರ್ ಆಗಬೇಕೆನ್ನುವ ಮಹದಾಸೆಯಲ್ಲಿ ತನ್ನ ಹೆಂಡತಿಯನ್ನೇ ಕಳೆದುಕೊಳ್ಳಬೇಕಾಗುತ್ತದೆ. ಹೆಂಡತಿ ಮಗುವನ್ನು ಕಳೆದುಕೊಂಡಿದ್ದ ಮೇಸ್ತ್ರಿ ವೇಲಾಯುಧನ್, ಲಿಂಗಪ್ಪನಿಗೆ ಕಂಟ್ರಾಕ್ಟರ್ ಗಿರಿಯನ್ನು ಕೊಡಿಸುವ ಆಮಿಷ ಒಡ್ಡಿ ಅವರ ಹೆಂಡತಿ ಗಂಗಮ್ಮನ ಮೇಲೆ ಕಣ್ಣು ಹಾಕುತ್ತಾನೆ. ಇದಕ್ಕೆ ಗಂಗಮ್ಮನ ಸಮ್ಮತಿ ಸಹಕಾರ ದೊರೆತು ಅವಳೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿರುತ್ತಾನೆ. ಇದನ್ನು ತಿಳಿದು ತಿಳಿಯದಂತೆ ವರ್ತಿಸುವ ಲಿಂಗಪ್ಪನ ಪಾತ್ರ ಅವನ ಸ್ವಾರ್ಥತೆಯನ್ನು ತೋರುತ್ತದೆ. ಕೊನೆಗೆ ವೇಲಾಯುಧನ್ ಜೊತೆಗೆ ತನ್ನೆಲ್ಲಾ ವಸ್ತುಗಳನ್ನು ತೆಗೆದುಕೊಂಡು ಅವಳು ಹೋದಾಗಲೂ ತಾನು ಅವರಿಬ್ಬರನ್ನು ಈ ಮಟ್ಟಕ್ಕೆ ಬರಲು ಬಿಡಬಾರದಾಗಿತ್ತೆಂದು ಪರಿತಪಿಸುತ್ತಾನೆ. ಅದಕ್ಕಿಂತ ಹೆಚ್ಚಾಗಿ ತಾನು ಹೊಸದಾಗಿ ಪಡೆದುಕೊಂಡ ಹೊಸ ಕಟ್ಟಡ ನಿರ್ಮಾಣದ ಜವಾಬ್ದಾರಿ ಹೊಸ ಕಂಟ್ರಾಕ್ಟರ್ ಹುದ್ದೆ ಅವನಲ್ಲಿ ಜಾಗೃತವಾಗಿ, ಹೆಂಡತಿಯನ್ನು ಕಳೆದುಕೊಂಡ ಬೇಸರದ ತೀವ್ರತೆ ಹಿಂದುಕ್ಕುಳಿಯುವುದನ್ನು ಕಾಣಬಹುದಾಗಿದೆ. ಗಂಡು ಹೆಣ್ಣಿನ ಸಂಬಂಧವನ್ನು ಮೀರಿದ ಅಧಿಕಾರದ ಸೆಳೆತ ಎಳೆತ ಪ್ರಬಲ ಎಂದು ತಿಳಿಯಬಹುದು ಅದಕ್ಕೆಂದೇ ದಾಸರು "ಯಾರು ಹಿತವರು ನಿನಗೆ ಈ ಮೂವರೊಳಗೆ ಮಾನಿನಿಯೋ ಧಾರಿಣಿಯೋ ಬಲಧನದ ಸಿರಿಯೇ ಎಂದು ಪ್ರಶ್ನಿಸಿರುವುದನ್ನು ಸೂಕ್ತವಾಗಿದೆ ಎನಿಸುತ್ತದೆ. ಈ ಮೂರು ಕೂಡ ಒಬ್ಬನಲ್ಲಿ ಒಂದು ಕಡೆ ಇರುವುದಿಲ್ಲ ಅಂತಲೇ ಕಂಟ್ರಾಕ್ಟರ್ ಗಿರಿಯನ್ನು ಪಡೆದುಕೊಂಡ ಲಿಂಗಪ್ಪ ಹೆಂಡತಿಯನ್ನು ಕಳೆದುಕೊಳ್ಳಬೇಕಾಯಿತು.

ಒಟ್ಟಿನಲ್ಲಿ ಹೆಣ್ಣಿನ ಬಗ್ಗೆ ಕಾಮಪ್ರೇಮಗಳ ಬಗ್ಗೆ ಡಿಸೋಜರವರು ತುಂಬಾ ವಿವರಿಸಲು ಹೋಗುವುದಿಲ್ಲ. ಒಂದು ಸೌಜನ್ಯದ ಚೌಕಟ್ಟಿನಲ್ಲೇ ಚಿತ್ರಿಸುತ್ತಾರೆ. ಗಂಡು ಹೆಣ್ಣಿನ ಸಂಬಂಧದಲ್ಲಿ ಯಾವುದೇ ಒಂದು ಸಂಕೀರ್ಣತೆಯನ್ನು ತರದೆ ಸರಳವಾದ ಸಂಕಟ ಆಕರ್ಷಣೆಯ ವಿವರಣೆಯನ್ನು ಇವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ.

## ಅಡಿ ಟಿಪ್ಪಣಿಗಳು

೧. ನಾ. ಡಿಸೋಜ ಕಾಡಿನ ಬೆಂಕಿ – ಮುನ್ನುಡಿ

೨. ನಾ. ಡಿಸೋಜ, ಕುಂಜಾಲು ಕಣಿವೆಯ ಕೆಂಪು ಹೂವು, ಪುಟ – ೧೩೩

# ಅಧ್ಯಾಯ ೭
# ಸಮಾರೋಪ

ಕನ್ನಡದಲ್ಲಿ ಕಾದಂಬರಿ ಪ್ರಕಾರವು ಹಲವಾರು ಸ್ಥಿತ್ಯಂತರಗಳನ್ನು, ಅವಸ್ಥೆಗಳನ್ನು ದಾಟಿ ಬಂದಿರುವ ಚಾರಿತ್ರಿಕ ಹಿನ್ನೆಲೆಯನ್ನು ಕಂಡರೆ, ಕಾಲಕ್ರಮದಲ್ಲಿ ಅದು ಪಡೆದುಕೊಂಡ ಸ್ವರೂಪ, ಬದಲಾವಣೆಗಳು ಅರ್ಥವಾಗುತ್ತದೆ. ಪ್ರಾರಂಭದಲ್ಲಿ ಬಂದ ಅನುವಾದ, ಸ್ವತಂತ್ರ, ಐತಿಹಾಸಿಕ ಪೌರಾಣಿಕ ಕಾದಂಬರಿಗಳಿಗೂ ವಾಸ್ತವತೆ, ಸಂಕೀರ್ಣತೆ ಕಲ್ಪನಾಮಯ, ಪ್ರಜ್ಞಾಪ್ರವಾಹ ತಂತ್ರ, ಅಂತರ್ಗತ ಶೈಲಿಗಳ ಆಧುನಿಕ ಕಾದಂಬರಿಗಳಿಗೂ ಗಣನೀಯವಾದ ಭಿನ್ನತೆ ಎದ್ದು ಕಾಣುತ್ತದೆ. ಒಂದು ಕಾಲದಲ್ಲಾಗುವ ಹೊಸ ಪ್ರಯೋಗಗಳು ಪ್ರಾಯೋಗಿಕವಾಗಿರುತ್ತದೆಯೇ ಹೊರತು ಸರ್ವಕಾಲಿಕವಾಗಿರುವುದಿಲ್ಲ. ಜೊತೆಗೆ ಜೀವನದ ವ್ಯಾಪ್ತಿ, ವೈರುಧ್ಯ, ಅದು ನೀಡುವ ಅನುಭವಗಳು ಇವುಗಳನ್ನು ಒಂದು ಚೌಕಟ್ಟಿಗೆ ಅಳವಡಿಸುವುದು ಕಷ್ಟಸಾಧ್ಯ. ಅಂತಲೇ ಮಹಾಕಾವ್ಯ, ಮಹಾನಾಟಕ, ಮಹಾಕಾದಂಬರಿಗಳು ಹಲವಾರು ತಲೆಮಾರುಗಳಲ್ಲಿ ಅಪರೂಪಕ್ಕೆಂಬಂತೆ ಕಾಣಿಸಿಕೊಳ್ಳುತ್ತವೆ.

ಮಲೆನಾಡಿನ ಬರಹಗಾರರಲ್ಲಿ ಇರುವಂತಹ ವಿಶಿಷ್ಟ ಗುಣ ಎಂದರೆ ಪ್ರಕೃತಿ ಪ್ರಿಯತೆ. ಹೀಗಾಗಿ ಇವರದೇ ಒಂದು ಪರಂಪರೆ ಇದೆ. ಕುವೆಂಪುರವರ ಪ್ರಕೃತಿ ಪ್ರಿಯತೆಯ ರಮ್ಯತೆಯನ್ನಿಟ್ಟುಕೊಂಡೇ ಇಲ್ಲಿನ ಬರಹಗಾರರು ಸಾಹಿತ್ಯವನ್ನು ರಚಿಸುತ್ತಿದ್ದಾರೆ. ಇದೇ ಪರಂಪರೆಯಲ್ಲಿ ಬಂದ ನಾ. ಡಿಸೋಜರವರು ತಮ್ಮ ಬಹುತೇಕ ಕಾದಂಬರಿಗಳಲ್ಲಿ ಮಲೆನಾಡಿನ ಪ್ರಕೃತಿಯ ಸೌಂದರ್ಯವನ್ನು ಬಣ್ಣಿಸಿದ್ದಾರೆ.

ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು, ಪರಿಸರವನ್ನು ಕುರಿತು ಬರೆದಂತಹ ಕಾದಂಬರಿಕಾರರಲ್ಲಿ ಪ್ರಮುಖವಾಗಿ ಕುವೆಂಪು, ತೇಜಸ್ವಿಯವರನ್ನು ಗುರುತಿಸಬಹುದು. ಕುವೆಂಪುರವರ ಕಾದಂಬರಿಗಳಲ್ಲಿ ಮಲೆನಾಡಿನ ದಟ್ಟ ಪ್ರಕೃತಿಯ ಚಿತ್ರಣವನ್ನು ಕಾಣಬಹುದಾಗಿದೆ. ಆದರೆ ಡಿಸೋಜರವರ ಕಾದಂಬರಿಗಳಲ್ಲಿ ಆ ರೀತಿಯ ವಿವರಣೆಯನ್ನು ಕಾಣಲು ಸಾಧ್ಯವಾಗದೇ ಹೋದರೂ, ಅವರು ತಮ್ಮದೇ ಆದ ರೀತಿಯಲ್ಲಿ ಪ್ರಕೃತಿ ಹಾಗೂ ಅದರ ನಾಶದ ಚಿತ್ರಣವನ್ನು ನೀಡುತ್ತಾ ಹೋಗಿರುವುದನ್ನು ಕಾಣಬಹುದಾಗಿದೆ.

ತೇಜಸ್ವಿಯವರ 'ಕಾರ್ವಾಲೋ' ಕಾದಂಬರಿಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅಲ್ಲಿ ಹಾರುವ ಓತಿಯನ್ನು ಕಾಣಲು ತಂಡವೊಂದು ಹೊರಟರೆ, 'ಕುಂಜಾಲು ಕಣಿವೆಯ ಕೆಂಪು ಹೂವು' ಕಾದಂಬರಿಯಲ್ಲಿ ಕೆಂಪು ಹೂವನ್ನು ಕಾಣಲು ನಾಯಕ ಒಬ್ಬನೇ ಹೋಗುತ್ತಾನೆ. ಅಲ್ಲಿಯೂ ಕಾಡನ್ನು ಅನೇಕ ಉದ್ದೇಶಗಳಿಗಾಗಿ ನಾಶಪಡಿಸಿರುವುದನ್ನು ಕಾದಂಬರಿಕಾರರು ವಿವರಿಸಿರುವುದನ್ನು ಕಾಣಬಹುದಾಗಿದೆ. ಅದರಂತೆ ಕುಂಜಾಲು ಕಣಿವೆಯಲ್ಲೂ ವಿವಿಧ ಉದ್ದೇಶಗಳಿಂದಾಗಿ ಪರಿಸರ ನಾಶದ ಬಗ್ಗೆ ಕಳಕಳಿಯನ್ನು ಗುರುತಿಸಬಹುದಾಗಿದೆ. 'ಕಾರ್ವಾಲೋ' ಕಾದಂಬರಿಯಲ್ಲಿ ಹಾರುವ ಓತಿಯನ್ನು ಹುಡುಕಲು ಹೋಗುವ ತಂಡದೊಂದಿಗೆ ಓದುಗರು ಹೋಗುತ್ತಿದ್ದೇವೇನೋ ಎನ್ನುವಷ್ಟು ಸ್ವಾಭಾವಿಕ ತಲ್ಲೀನತೆ ಉಂಟಾದರೆ; 'ಕುಂಜಾಲು ಕಣಿವೆಯ ಕೆಂಪು ಹೂವು' ಆ ರೀತಿಯ ತಲ್ಲೀನತೆಯನ್ನು ಉಂಟುಮಾಡುವುದಿಲ್ಲ.

ಶಿವಮೊಗ್ಗ ಜಿಲ್ಲೆಯ ಪ್ರಕೃತಿ ಮಡಿಲಿನಲ್ಲಿ ಹುಟ್ಟಿ ಬೆಳೆದ ನಾ.ಡಿಸೋಜ ಅವರು ಬಾಲ್ಯದಲ್ಲಿ ಸಮೃದ್ಧವನ ಸಂಪತ್ತನ್ನು ಕಂಡು ಸವಿದವರಾಗಿದ್ದಾರೆ. ಮಲೆನಾಡಿನಿಂದ, ಕರಾವಳಿಯವರೆಗಿನ ನೆಲ, ಜಲ ಸಂಪತ್ತು ಐದಾರು ದಶಕಗಳಲ್ಲಿ ಹೇಗೆ ಬದಲಾವಣೆ ಕಂಡಿದೆ ಎಂಬುದನ್ನು ತಮ್ಮ ಕಾದಂಬರಿಗಳಲ್ಲಿ ಗುರುತಿಸುತ್ತಾರೆ. ಪರಿವರ್ತನಾಶೀಲ ಮಾನವ ತನ್ನ ಸ್ವಾರ್ಥ ಲಾಲಸೆಗಳಿಗೆ ಪ್ರಗತಿಯ ಹೆಸರಿನಲ್ಲಿ ಪ್ರಕೃತಿಯನ್ನು ನಾಶಪಡಿಸುತ್ತಾ ಮುಂದಿನ ಪೀಳಿಗೆಗೆ ಏನೊಂದನ್ನು ಉಳಿಸದೇ ಇರುವುದರ ಬಗ್ಗೆ ಅವರಿಗೆ ವಿಷಾದವಿದೆ.

ಡಿಸೋಜರವರ ಕೃತಿಗಳಲ್ಲಿ ಅಲ್ಲಲ್ಲಿ ದಂಗೆ ಏಳಿಸುವಂತಹ, ಚಳುವಳಿ ನಡೆಸುವಂತಹ ಘಟನೆಗಳು ಕಾಣಿಸಿಕೊಂಡರು, ಯಾರೋ ಸ್ವಾರ್ಥಿಗಳು ತಮ್ಮ ಬೇಳೆ ಬೇಯಿಸಿಕೊಳ್ಳುವ ಸಲುವಾಗಿ. ಸಮಾಜವನ್ನು ಮೂಢನಂಬಿಕೆಗಳಿಗೆ ಒಡ್ಡುವ, ನಿಜ ಕಳಕಳಿಯುಳ್ಳವರು ಅಸಹಾಯಕರಾಗುವ, ಬಂಡವಾಳ ಶಾಹಿಗಳು ರಾಜಕೀಯ ಬೆಂಬಲದಿಂದ ವಿಜಯಿಗಳಾಗುವಲ್ಲಿಗೆ ಮತ್ತು ಸಮಾಜ ಅಸಹಾಯಕತೆಗೆ ತನ್ನನ್ನು ಒಡ್ಡಿಕೊಂಡು ನಿರ್ಲಿಪ್ತವಾಗಿ ಬಿಡುವುದನ್ನು ಕಾಣಬಹುದಾಗಿದೆ.

ಡಿಸೋಜರವರ ಕಾದಂಬರಿಗಳಲ್ಲಿ ಎಲ್ಲಿಯೂ ಉದ್ವೇಗವು ಪ್ರಕಟಗೊಳ್ಳುವುದಿಲ್ಲ. ಎಲ್ಲಿಯೂ ಭಾವೋನ್ಮಾದಗಳು ಭೋರ್ಗರೆಯುವುದಿಲ್ಲ. ಹಾಗಾಗಿ ಪಾತ್ರಗಳ ಸೃಷ್ಟಿಯಲ್ಲಿ ಸಂಭಾಷಣೆಯಲ್ಲಿ

ಘಟನೆಗಳ ಚಲನೆಯಲ್ಲಿ ಭಾವುಕತೆಯ ಯಾವ ಸೋಂಕು ಇಲ್ಲದೆ ತಂತಾನೆ ಘಟಿಸುತ್ತಾ ಹೋಗುವುದರಿಂದ ಇವರ ಅನೇಕ ಕಾದಂಬರಿಗಳನ್ನು ಒಟ್ಟಿಗೆ ಓದಿದರೆ ಒಂದು ರೀತಿಯ ಏಕತಾನತೆ ಉಂಟಾಗಿ ಸಾಮಾನ್ಯ ಓದುಗನೂ ಬೇಸರಮಾಡಿಕೊಳ್ಳುವ ಅಪಾಯವೂ ಇಲ್ಲದಿಲ್ಲ. ಹಾಗಾಗಿ ಡಿಸೋಜರವರ ಕೃತಿಗಳನ್ನು ಓದುವಾಗ ಇತರ ಲೇಖಕರ ಕೃತಿಗಳನ್ನು ಓದುವ ರೀತಿಯಲ್ಲಿ ಓದುತ್ತಾ ಹೋದರೆ ಓದುಗರಿಗೆ ಅವುಗಳ ಸಾರ ತಿಳಿಯದೆ ನೀರಸವೆನಿಸಬಹುದು. ಆದರೆ ಲೇಖಕರ ಆಶಯ ಕಳಕಳಿಯನ್ನು ಗುರುತಿಸಬಲ್ಲವರಾದರೆ ಮಾತ್ರ ಅವುಗಳ ಸತ್ವ ಸೊಗಸುಗಳು ಗೋಚರಿಸಿ, ಅವು ಅಧ್ಯಯನಕ್ಕೆ ಯೋಗ್ಯವೆಂಬ ವಿಚಾರಗಳು ಮನದಟ್ಟಾಗುತ್ತವೆ.

ವ್ಯಕ್ತಿಯಾಗಿ, ಲೇಖಕರಾಗಿ ಡಿಸೋಜರವರು ಸಮಾಜದಲ್ಲಿ ಪ್ರೀತ್ಯಾದರ, ಗೌರವಗಳನ್ನು ಸಂಪಾದಿಸಿಕೊಂಡಿದ್ದಾರೆ.ಕಾಡು, ವನಸಂಪತ್ತು ಮುಂದೊಂದು ದಿನ ಮಾಯವಾಗಿ ಪ್ರಾಣಿಪಕ್ಷಿಗಳು ನಶಿಸಿ ಕೇವಲ ಚಿತ್ರಗಳಲ್ಲಿ ದಂತ ಕಥೆಗಳಲ್ಲಿ ಮಾತ್ರ ಉಳಿಯುತ್ತವೆ. ಎನ್ನುವ ಆತಂಕ ಬಹುಶಃ ಅವರನ್ನು ಕಾಡಿರಬಹುದು. ಪರಿವರ್ತನಾ ಶೀಲ ಜಗತ್ತು ಎಲ್ಲವನ್ನು ಪರಿವರ್ತಿಸುತ್ತಾ, ನಾಶಗೊಳಿಸುತ್ತಾ ತನ್ನ ನೆಲ, ಜಲ ಎಲ್ಲವನ್ನು ವಿನಾಶದ ಅಂಚಿಗೆ ತಳ್ಳಿ ತನ್ನ ವಿನಾಶವನ್ನು ತಾನೇ ತಂದುಕೊಳ್ಳುವ ವಿಚ್ಛಿದ್ರಕಾರಿ ಪ್ರವೃತ್ತಿಯ ಬಗೆಗೆ ನಾವೆಲ್ಲಾ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

"ಇಬ್ಬನಿಯು ಇಡಿಯ ಆಕಾಶವನ್ನು ಪ್ರತಿಬಿಂಬಿಸುತ್ತದೆ. ನೀರ್ಹನಿಯೂ ಕಾಮನಬಿಲ್ಲನ್ನು ಮೂಡಿಸಬಲ್ಲದು. ಹಾಗೆಯೇ ನಾ.ಡಿಸೋಜರವರ ಒಂದೊಂದು ಕಥೆಯು ತನ್ನ ಪರಿಸರದ ಬದುಕಿನ, ಸಂಸ್ಕೃತಿಯ ಭಾವಕೋಶದ ಮುದ್ರೆಯನ್ನು ನಿಚ್ಚಳವಾಗಿ, ಸಹಜವಾಗಿ ಒತ್ತಿಕೊಡೇ ಬರುತ್ತದೆ."[1] ಎನ್ನುವ ಗೌರೀಶ ಕಾಯ್ಕಿಣಿಯವರ ಮಾತು ಅರ್ಥಪೂರ್ಣವಾಗಿದೆ.

ಇವರ ಕಾದಂಬರಿಗಳನ್ನು ಓದಿದಾಗ ಗಂಭೀರ ವಿಷಯವನ್ನು ಸರಳವಾಗಿ ಅರ್ಥೈಸುವ ಶೈಲಿ ಇವರದಾಗಿದೆ. ಪ್ರತಿಭಟಿಸುವುದೇ ಬಂಡಾಯವಲ್ಲ. ಪರಿಸ್ಥಿತಿಯ ಬಗ್ಗೆ ಅರಿವನ್ನು ಮೂಡಿಸುವುದು ಬಂಡಾಯವೇ ಆಗುತ್ತದೆ. ಅಂದಂದಿನ ಪ್ರಮುಖ ವಿಷಯವೊಂದಕ್ಕೆ ತತ್‌ಕ್ಷಣದ ಪ್ರತಿಕ್ರಿಯೆ ನೀಡುವುದರಿಂದ ಅದೊಂದು ವರದಿಯಂತೆ ನಿರೂಪಿತವಾದರೂ. ಕಥೆ ಮೊರಕವಚದಂತಿರುತ್ತದೆ. ಕಥೆಯ ವಸ್ತುವಿಗಿಂತ ಹೇಳಬೇಕಾದ ವಿಷಯವೇ ಪ್ರಧಾನವಾಗಿರುವುದರಿಂದ ಉತ್ಕೃಷ್ಟ

ವಸ್ತುಗಳಿದ್ದರೂ ವಸ್ತುವಿಗೆ ಒತ್ತು ಸಿಗದೆ ಸೊರಗಿ ಬಿಡುತ್ತವೆ.ಒಟ್ಟಿನಲ್ಲಿ ಕಾದಂಬರಿಕಾರರ ಆಶಯವನ್ನು ಗ್ರಹಿಸಲು ಓದುಗರಿಗೆ ತೊಂದರೆ ಏನೂ ಆಗುವುದಿಲ್ಲ. ಅವರ ಒಟ್ಟು ಕಥಾ ಸಂವಿಧಾನದ ರೀತಿಯೇ ಇದಾಗಿದ್ದು, ವಸ್ತುಗಳು ಭಿನ್ನವಾಗಿದ್ದರೂ ಅವರ ಕಾದಂಬರಿ ಸಂರಚನಾ ಕೌಶಲವು ವ್ಯತ್ಯಾಸವಾಗಿಲ್ಲದಿರುವುದರಿಂದ ಅದನ್ನು ಹಾಗೆಯೇ ಸ್ವೀಕರಿಸಬೇಕಾಗುತ್ತದೆ.

ಕಾದಂಬರಿಗಳ ಕೊನೆಯ ಸಂದೇಶವೇನೆಂದರೆ ಮನುಷ್ಯ ಮಾಡಿರುವ ಪಲ್ಲಟಕ್ಕೆ ಕೊನೆಗೆ ಅವನೇ ಬಲಿಯಾಗಬೇಕು. ಸಮಾಜ ಸುಸ್ಥಿತಿಯಲ್ಲಿರಲು ನೈತಿಕ ಮೌಲ್ಯಗಳನ್ನು ಯಾವಾಗಲೂ ಕಾಪಾಡಿಕೊಳ್ಳಬೇಕು ಆದರೆ ಅವುಗಳು ಇಂದು ಕಾಣೆಯಾಗುತ್ತಿವೆ. ಇದರಿಂದ ಜೀವನಕ್ಕೆ ಭದ್ರತೆ ಇಲ್ಲದಂತಾಗುತ್ತದೆ ಎಂಬುದಾಗಿದೆ. ಮಾನವ ವಿನಾಶಕಾರಿ ಪ್ರವೃತ್ತಿ ಮುದೊಂದು ದಿನ ಅವನ ಜೀವನಕ್ಕೆ ಮುಳುವಾಗುತ್ತದೆ ಎಂಬುದನ್ನು ಡಿಸೋಜಾರವರು ಒತ್ತಿ ಹೇಳಿದ್ದಾರೆ. ಪ್ರಕೃತಿಯ ಬಗ್ಗೆ ಕಾಳಜಿ ಹೊಂದಿರುವ ಇವರು ಅದರ ಉಳಿವಿಗಾಗಿ ತಮ್ಮ ಕಾದಂಬರಿಯ ಮೂಲಕ ಎಚ್ಚರಿಕೆಯನ್ನು ನೀಡಿದ್ದಾರೆ.

ದೇಶದಲ್ಲಿ ಪ್ರಗತಿ ಎಂಬುದು ಆಗಬೇಕು, ಅದು ಎಲ್ಲರಿಗೂ ಪೂರಕವಾಗಿರಬೇಕು.ಕೆಲವರ ಬದುಕನ್ನು ಬಲಿ ತೆಗೆದುಕೊಂಡು ಮಾಡುವ ಪ್ರಗತಿಯು ಪ್ರಗತಿಯಲ್ಲ. ಅಣೆಕಟ್ಟು ಕಟ್ಟುವುದು ದೇಶದ ಅಭಿವೃದ್ದಿಯ ಕಾರ್ಯ ಎಂದು ಜನ ತಮ್ಮ ಮನೆ–ಮಠ, ಸಂಬಂಧ, ಪರಿಸರ ಎಲ್ಲವನ್ನೂ ತ್ಯಾಗ ಮಾಡಿದ್ದಾರೆ. ಅವರ ಜಮೀನಿಗೆ ಪರಿಹಾರ ಕೊಡಬಹುದು, ಅದು ತಾತ್ಕಾಲಿಕವೇ ವಿನಃ ಅವರ ಹಾಳಾದ ಬದುಕಿಗೆ ಪರಿಹಾರ ಕೊಡಲು ಸಾಧ್ಯವಿಲ್ಲ. ಕಳೆದುಕೊಂಡವರ ಬಗ್ಗೆ ನೋವು ಅವರ ಜೀವನವನ್ನು ಜೀವಿತದ ಕೊನೆಯವರೆಗೂ ಬಾಧಿಸುತ್ತದೆ. ಈ ಮುಳುಗಡೆ ಅಣೆಕಟ್ಟು ನಿರ್ಮಾಣ ಎಂಬುದು ದೇಶಕ್ಕೆ ಅಭಿವೃದ್ಧಿ ಸಾಧಿಸುವ ಒಂದು ಸಾಧನವಾಗಿರಬಹುದು. ಆದರೆ ಅದರ ಹಿಂದಿನ ನಿಟ್ಟುಸಿರಿಗೆ ಬೆಲೆಯನ್ನು ಯಾರಿಂದಲೂ ಕಟ್ಟಲೂ ಸಾಧ್ಯವಿಲ್ಲ.

ಸಮಾಜ ನಿರಂತರ ಪ್ರಗತಿಗೆ ತನ್ನನ್ನು ಒಡ್ಡಿಕೊಳ್ಳುತ್ತಲೇ ಇರುತ್ತದೆ. ಹೊಸ ಹೊಸ ಬದಲಾವಣೆಯನ್ನು ಸ್ವೀಕರಿಸುತ್ತಲೇ ಇರುತ್ತದೆ. ಆ ಬದಲಾವಣೆ ನಮ್ಮ ಸಂಸ್ಕೃತಿಗೆ ಮಾರು ಹೋಗುತ್ತದೆ. ಅದರಿಂದ ಅಪಾಯಗಳೇ ಹೆಚ್ಚು ಬದಲಾವಣೆಯ ಗಾಳಿಯ ಪ್ರಭಾವ

ಸಾಮೂಹಿಕವಾಗಿರುವಾಗ ಸಮೂಹದ ಹಿತಚಿಂತನೆ ಮುಖ್ಯವಾಗಿರುತ್ತದೆ. ಮನುಷ್ಯರಾದ ನಾವು ಪರಿಸರದ ಮತ್ತು ಮನುಷ್ಯ ಸಂಬಂಧ ಪ್ರೀತಿಯ ಬದುಕನ್ನು ಕಟ್ಟಿಕೊಳ್ಳಬೇಕೆಂಬ ತುಡಿತ ಡಿಸೋಜರವರ ಕಾದಂಬರಿಗಳಲ್ಲಿದೆ.

ಈ ಬಗೆಯ ಎಲ್ಲಾ ವಿಷಯವನ್ನು ಡಿಸೋಜರವರ ಸರಳವಾದ ಶೈಲಿಯ ಬರಹದಲ್ಲಿ ಗಮನಿಸಿದ್ದು ಅವರ ಆಯ್ದ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಸ್ಥಿತ್ಯಂತರವನ್ನು ನನ್ನ ಅಧ್ಯಯನದ ಮಿತಿಯಲ್ಲಿ ಗ್ರಹಿಸಲು ಪ್ರಯತ್ನಿಸಿದ್ದೇನೆ.

### ಅಡಿ ಟಿಪ್ಪಣಿಗಳು

೧. ಗೌರಿಶ್ ಕಾಯ್ಕಿಣಿ ಕನ್ನಡ ಕಥಾಲೋಕದ ಚೆಕೋವ್, ಪುಟ – ೨೪
ನಾ. ಡಿಸೋಜ ಅಭಿನಂದನ ಗ್ರಂಥ

## ಪರಾಮರ್ಶನ ಗ್ರಂಥಗಳು :


1. ಅನಂತ ಮೂರ್ತಿ.ಯು.ಆರ್-ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ-1971
2. ಅಮೂರ.ಜಿ.ಎಸ್. ಕನ್ನಡ ಕಥನ ಸಾಹಿತ್ಯ ಕಾದಂಬರಿ, ಶ್ರೀಹರಿ ಪ್ರಕಾಶನ,ಧಾರವಾಡ-1991
3. ಅಶೋಕ.ಟಿ.ಪಿ-ಸಾಹಿತ್ಯ ಸಂದರ್ಭ,ಅಕ್ಷರ ಪ್ರಕಾಶನ, ಹೆಗ್ಗೋಡು ಸಾಗರ-1991
4. ಜೇಕೋಬ್ ಲೋಬ್.ಸಿ.ಹೆಚ್.(ಸಂ)-ನಾ.ಡಿಸೋಜ ಅಭಿನಂದನ ಗ್ರಂಥ, ಆಶೀರ್ವಾದ ಬೆಂಗಳೂರು-1993
5. ಗೋಕಾಕ್.ವಿ.ಕೃ-ಸಾಹಿತ್ಯ ವಿಮರ್ಶೆಯ ತತ್ವಗಳು.ಐ.ಬಿ.ಹೆಚ್ ಪ್ರಕಾಶನ. ಬೆಂಗಳೂರು
6. ಗೋಪಾಲ ಕೃಷ್ಣಯ್ಯಕೆ.ಎಲ್.-ಸಾಹಿತ್ಯ ಸಂವಾದ.ವಿಶ್ರಾಂತ ಪ್ರಕಾಶನ,ಬೆಂಗಳುರು-1993
7. ಗಿರಡ್ಡಿ ಗೋವಿಂದರಾಜು-ಕಾದಂಬರಿ ವಸ್ತು ಮತ್ತು ತಂತ್ರ, ಸ್ನೇಹ ಪ್ರಕಾಶನ ಬೆಂಗಳೂರು
8. ಗಿರಡ್ಡಿ ಗೋವಿಂದರಾಜು-ನವ್ಯವಿಮರ್ಶೆ, ಅಕ್ಷರ ಪ್ರಕಾಶನ,ಹೆಗ್ಗೋಡು ಸಾಗರ-1975
9. ಕೀರ್ತಿನಾಥ ಕುರ್ತಕೋಟಿ-ವಿಮರ್ಶೆಯ ವಿಷಯ, ಕಾದಂಬರಿ, ಮನೋಹರ ಗ್ರಂಥಮಾಲೆ ಧಾರವಾಡ-1982
10. ಕೀರ್ತಿನಾಥ ಕುರ್ತಕೋಟಿ-ಯುಗಧರ್ಮ ಮತ್ತು ಸಾಹಿತ್ಯದರ್ಶನ ಮನೋಹರ ಗ್ರಂಥಮಾಲೆ ಧಾರವಾಡ-2002
11. ಕೇಶವ ಶರ್ಮ-ಕ್ರಿಯೆ ಮತ್ತು ಪ್ರತಿಕ್ರಿಯೆ, ಅನ್ವೇಷಣೆ ಪ್ರಕಾಶನ ಬೆಂಗಳೂರು-1994
12. ಕೇಶವ ಶರ್ಮ-ಶಬ್ದರೇಖೆ,ಅಭಿನವ ಪ್ರಕಾಶನ ಬೆಂಗಳೂರು-1998
13. ನಾಗರಾಜ.ಡಿ.ಆರ್.ಸಾಹಿತ್ಯ ಕಥನ. ಅಕ್ಷರ ಪ್ರಕಾಶನ-ಹೆಗ್ಗೋಡು ಸಾಗರ
14. ನಾಗಭೂಷಣ್ ಸ್ವಾಮಿ.ಜಿ.ಎಲ್-ವಿಮರ್ಶೆಯ ಪರಿಭಾಷೆ, ಪರಿಸರ ಸಾಹಿತ್ಯ ಪ್ರಕಾಶನ ಶಿವಮೊಗ್ಗ-1983
15. ಶ್ರೀಕಂಠ ಕೂಡಿಗೆ-ಧ್ಯಾನ,ಚೇತನಾಬುಕ್ ಹೌಸ್, ಮೈಸುರು-1999
16. ಶಾಂತಿನಾಥ ದೇಸಾಯಿ-ನವ್ಯಸಾಹಿತ್ಯ ದರ್ಶನ, ಪರಿಸರ ಸಾಹಿತ್ಯ ಪ್ರಕಾಶನ ಶಿವಮೊಗ್ಗ-1990

17. ಶೇಷಗಿರಿ ರಾವ್.ಎಲ್.ಎಸ್-ಕಾದಂಬರಿ ಮತ್ತು ಸಾಮಾನ್ಯ ಮನುಷ್ಯ ಶಾರದ ಪ್ರಕಾಶನ ಬೆಂಗಳೂರು-1990

18. ಶೇಷಗಿರಿ ರಾವ್-ಹೊಸಗನ್ನಡ ಸಾಹಿತ್ಯ,ಬೆಂಗಳೂರು ವಿಶ್ವವಿದ್ಯಾನಿಲಯ.ಬೆಂಗಳೂರು-1975

19. ಶಿವರುದ್ರಪ್ಪ.ಜಿ.ಎಸ್.-ಗತಿಬಿಂಬ,ಸುರಭಿ ಪ್ರಕಾಶನ,ಮೈಸೂರು-1969

20. ಶಿವರುದ್ರಪ.ಜಿ.ಎಸ್.-ಸಾಹಿತ್ಯ ಮತ್ತು ಸಾಮಾಜಿಕ ಮೌಲ್ಯ ಬೆಂಗಳೂರು ವಿಶ್ವವಿದ್ಯಾನಿಲಯ,ಬೆಂಗಳೂರು.

21. ತಿಪ್ಪೇರುದ್ರಸ್ವಾಮಿ. ಹೆಚ್-ಕನ್ನಡ ವಿಮರ್ಶೆ ಕವಲು ದಾರಿಯಲ್ಲಿ, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.

## ಆಕರ ಗ್ರಂಥ

1. ದ್ವೀಪ
2. ಮುಳುಗಡೆ
3. ಒಡ್ಡು
4. ಕುಂಜಾಲು ಕಣಿವೆಯ ಕೆಂಪು ಹೂವು
5. ಒಂದು ಜಲಪಾತದ ಸುತ್ತ }ನಾ.ಡಿಸೋಜ
6. ನೀರು
7. ವಿಷಾನಿಲ
8. ಚಿನ್ನದ ಮೊಟ್ಟೆ

